# ಋಗ್ವೇದ ಕಥೆಗಳು

ಮೂಲ : ಡಾ. ರಘುನಾಥ್ ಸಿಂಹ
ಅನುವಾದ : ವಿದ್ವಾನ್ ಪಿ ಮರಿಬಸವಾರಾಧ್ಯ

ಸನ್ ಪಬ್ಲಿಷರ್ಸ್
92, 2ನೇ ಮೇಯಿನ್, ಆರ್. ಪಿ. ಸಿ. ಲೇ ಔಟ್
ವಿಜಯನಗರ, ಬೆಂಗಳೂರು-560040

# ಅರಿಕೆ

ಭಾರತದ ಪ್ರಾಚೀನ ಭಾಷೆಗಳಲ್ಲಿ ಮೊದಲ ಸ್ಥಾನ ಸಂಸ್ಕೃತಕ್ಕೆ. ಅವರಲ್ಲಿ ಋಗ್ವೇದ ಪ್ರಾಚೀನ ಗ್ರಂಥ. ಆರ್ಯರ ಪರಂಪರೆಯಲ್ಲಿ ವೇದವೇ ಅಂತಿಮವಾದುದು. ಅದು ಒಂದು ಜೀವನದಿ, ಒಂದು ವಟ ವೃಕ್ಷವಿದ್ದಂತೆ. ದೇಶಕಾಲಕ್ಕನುಗುಣವಾಗಿ ಪರಿಸ್ಥಿತಿಗಳು ಬದಲಾದವು. ಮೂಲಧರ್ಮ ಒಂದೇ ಆಗಿದ್ದರೂ ಶಾಖೋಪಶಾಖೆಗಳು ಒಂದಲ್ಲ ಒಂದು ಧರ್ಮವನ್ನು ಪ್ರತಿಪಾದಿಸಲು ಹೊರಟವು. ಇದರಲ್ಲಿ ಜ್ಞಾನ,ಕರ್ಮ, ಉಪಾಸನೆ, ದರ್ಶನ, ಧರ್ಮ, ಇತಿಹಾಸ, ಸಮಾಜ, ಅರ್ಥ, ರಾಜನೀತಿಗಳು ಇತ್ಯಾದಿಗಳನ್ನು ಕಾಣಬಹುದಾಗಿದೆ. ನಿರರ್ಥಕ ವಿಷಯಗಳ ಪ್ರತಿಪಾದನೆ ಅಲ್ಲಿ ಬರುವುದಿಲ್ಲ. ಅವರ ಸಾಹಿತ್ಯ ತೇಜೋಮಯ. ಅದು ಎಲ್ಲರಿಗೂ ಪ್ರಿಯವಾದುದು.

ಇದರಲ್ಲಿ ಬರುವ ಕಥೆಗಳು ಅಂದಿನ ಸಮಾಜದ ಪ್ರತಿನಿಧಿಗಳಾಗಿವೆ. ಆ ಕಥೆಗಳನ್ನು ಇಲ್ಲಿ ಸಂಕ್ಷೇಪಿಸಲಾಗಿದೆ. ವೈದಿಕ ಆರ್ಯರು ಗಂಗಾ ನದಿಯಿಂದ ಹಿಡಿದು ರಷ್ಯ, ಸ್ಪೇನ್, ಮಿಶ್ರ ದೇಶದವರೆವಿಗೆ ಹರಡಿದ್ದರು. ಅವರಿಗೆ ಇರಾನ್, ಸಿರಿಯಾ, ಅರಬ್, ಮಧ್ಯ ಏಷ್ಯಗಳ ಸಾಮಾಜಿಕ, ರಾಜನೈತಿಕ, ಆರ್ಥಿಕ ಪರಿಸ್ಥಿತಿಗಳ ಅರಿವಿತ್ತು. ಅದನ್ನು ನಾವು ವೇದಗಳಲ್ಲಿ ಕಾಣಬಹುದಾಗಿದೆ. ವೇದದ 200 ಸೂತ್ರಕಾರ ಋಷಿಗಳಿಗೆ ಈ ಭೂಖಂಡದ ಅರಿವಿತ್ತು. ಅವರು ವಿಭಿನ್ನ ವಿಚಾರ ಧಾರೆಗಳಿಂದ ತಮ್ಮ ಅಭಿಪ್ರಾಯವನ್ನು ಅಭಿವ್ಯಕ್ತಗೊಳಿಸಿದ್ದಾರೆ. ಅವುಗಳು ಜ್ಞಾನ ವಿಜ್ಞಾನದ ಸಾಮಾಜಿಕ ನಡತೆಗಳ ಸೂತ್ರಗಳ ತವರು.

ಇಂತಹ ಕಥಾ ಸಂಕಲನ ಎಂದೆಂದಿಗೂ ಪ್ರಸ್ತುತವೆಂಬುದನ್ನು ಸಾದರಪಡಿಸಲು 'ಸನ್ ಪಬ್ಲಿಷರ್ಸ್' ನವರು ಇದನ್ನು ಪ್ರಕಟಿಸುತ್ತಿರುವುದು ಸ್ತುತ್ಯಾರ್ಹ.

ವಿದ್ವಾನ್ ಪಿ. ಮರಿಬಸವಾರಾಧ್ಯ.

# ಪರಿವಿಡಿ

# ದಧ್ಯಂಚ

[ಪ್ಲಾಸ್ಟಿಕ ಸರ್ಜರಿ ಅಂದರೆ ಶಲ್ಯಚಿಕಿತ್ಸೆ. ಈ ವಿಜ್ಞಾನ ಬಹಳ ಮುಂದುವರಿದಿದೆ ಎಂಬುದು ಎಲ್ಲರ ಭಾವನೆ. ಹಿಂದಿನ ಕಾಲದಲ್ಲಿ ಸರ್ಜರಿ ಅಥವಾ ಶಲ್ಯಚಿಕಿತ್ಸೆ ಇಂದಿನದಕ್ಕಿಂತ ಹಿಂದುಳಿದಿರಲಿಲ್ಲ. ಇದಕ್ಕಿಂತಲೂ ಮುಂದುವರಿದಿತ್ತು. ಇಂದಿನ ವಿಜ್ಞಾನ, ಹಿಂದಿನ ವಿಕಾಸಾವಸ್ಥೆಗೆ ಬರಬೇಕಾದರೆ ಬಹಳ ಸಮಯಬೇಕು. ಇದು ಒಂದು ಋಗ್ವೇದದ ಕಥೆ. ಅಶ್ವಿನೀ ಕುಮಾರರು ಶಸ್ತ್ರಚಿಕಿತ್ಸೆ ಹಾಗೂ ಔಷಧ ವಿಧಾನದಲ್ಲಿ ಶ್ರೇಷ್ಠರೆಂದು ಪರಿಗಣಿಸಲಾಗಿದೆ. ಅವರು ಇಂದಿನ ಗ್ರಾಫ್ಟಿಂಗಿಗೆ ಸಮಾನವಾದ ದಧ್ಯಂಚನ ಶಿರಸ್ಸನ್ನು ಕತ್ತರಿಸಿ ಅದಕ್ಕೆ ಮತ್ತೊಂದು ಶಿರಸ್ಸನ್ನು ಜೋಡಿಸಿದ್ದರು. ಹಿಂದಿನ ಶಿರಸ್ಸಿನಂತೆ ಎಲ್ಲಾ ಕೆಲಸಕಾರ್ಯಗಳು ನಡಯುತ್ತಿದ್ದವು. ಋಗ್ವೇದಕಾರರು ಆ ಸಿದ್ಧಾಂತವನ್ನು ಕಥಾರೂಪದಲ್ಲಿ ನಿರೂಪಿಸಿದ್ದಾರೆ.]

ಶ್ವೇತಾಶ್ವಗಳಿಂದ ಕಟ್ಟಲ್ಪಟ್ಟ ಒಂದು ದಿವ್ಯರಥವು ಮಹರ್ಷಿ ದಧ್ಯಂಚನ ಆಶ್ರಮಕ್ಕೆ ಬಂದಿತು. ಪೀತವಸ್ತ್ರವನ್ನು ಧರಿಸಿದ ಮಂದಾರಮಾಲೆಯಿಂದ ಶೋಭಿಸುವ ಆಭರಣಗಳಿಂದ ಅಲಂಕೃತನಾದ ಶಚೀಪತಿ ಇಂದ್ರನು ರಥದಿಂದ ಇಳಿದ. ಕೈಯಲ್ಲಿ ವಜ್ರಾಯುಧವಿತ್ತು. ದಧ್ಯಂಚ ಋಷಿಯು ಸಮೀಪಕ್ಕೆ ಸಿಧಾನವಾಗಿ ಹೋದ. ಋಷಿಯು ಸುರೇಂದ್ರನನ್ನು ನೋಡಿದ. ತನ್ನ ತಪಸ್ಸನ್ನು ನಿಲ್ಲಿಸಿ ದೈವಭಕ್ತಿಯಿಂದ ಕುಶಾಸನದಿಂದ ಎದ್ದ. ಅವನಲ್ಲಿ ಯಾವ ಅಭಿಲಾಷಗಳೂ ಇರಲಿಲ್ಲ. ಶಾಂತನಾಗಿದ್ದ. ಇಂದ್ರನನ್ನು ಸ್ವಾಗತಿಸಲು ನಿರ್ಮಲ ಭಾವದಿಂದ ಮುಂದಾದ. ಅವನು ಆಸೆಗಳನ್ನು ತ್ಯಜಿಸಿದ್ದ. ಅಗ್ನಿಯಿಂದ ಸ್ಫುಟಗೊಂಡ ಚಿನ್ನದ ಕಾಂತಿಯಿಂತಿದ್ದ.

'ಪುರಂದರ! ಈ ಆಶ್ರಮವು ನಿನ್ನನ್ನು ಸ್ವಾಗತಿಸುತ್ತದೆ. ದಯೆಯಿಟ್ಟು ಪಾದ್ಯ, ಅರ್ಘ್ಯ, ಆಚಮನ ಮತ್ತು ಮಧುಪರ್ಕವನ್ನು ಸ್ವೀಕರಿಸು" ಎಂದ.

'ಋಷಿಗಳೇ! ಕುಶಲವೆ,' ? ಎಂದು ಪ್ರಸನ್ನಮುಖಿಯಾಗಿ ಕೇಳಿದ ಇಂದ್ರ.

"ತಮ್ಮ ಮಹಾನ್ ಕೃಪೆಯಿಂದ ಭಗವನ್"

ಪುಷ್ಪಗಳಿಂದ ತುಂಬಿದ ಆಶ್ರಮವನ್ನೊಮ್ಮೆ ನೋಡಿದ ಇಂದ್ರ. ಯಜ್ಞವೇದಿಯಿಂದ ಸುಗಂಧಿತ ಧೂಮವು ವಾಯುಮಂಡಲವನ್ನು ಶುದ್ಧೀಕರಿಸುತ್ತಿತ್ತು. ಋಷಿ ಹೃದಯದ ಪಾವಿತ್ರ್ಯವು ಆಶ್ರಮದ ಕಣಕಣದಲ್ಲಿಯೂ ತುಂಬಿತ್ತು.

"ಮಹಾತ್ಮರೆ! ತಮಗೆ ಯಾವುದರ ಆಕಾಂಕ್ಷೆ ಇಲ್ಲವೆಂಬುದು ನನಗೆ ಗೊತ್ತು. ಆದರೂ ನನ್ನಿಂದ ಏನಾದರೂ ಆಗಬೇಕಿದ್ದರೆ ಕೇಳಿ" ಎಂದ.

ಋಷಿಯಿಂದ ಯಾವ ಪ್ರತಿಕ್ರಿಯೆಯೂ ಕಾಣಲಿಲ್ಲ. ನಿರ್ಲಿಪ್ತನಾಗಿ ತಲೆಬಾಗಿಸಿ ನಿಂತಿದ್ದ. ಇಂದ್ರನು ಆಗ್ರಹಪಡಿಸುತ್ತಾ,

"ಋಷಿಗಳೆ ! ತಾವು ತ್ಯಾಗಮೂರ್ತಿಗಳು ತಪಸ್ಸು ಅಥವಾ ಸತ್ಯವನ್ನು ವಿಕಾಸಗೊಳಿಸುವಲ್ಲಿ ನನ್ನ ಸಹಾಯಬೇಕಿದ್ದರೆ ಕೇಳಿ ನಾನು ಪೂರೈಸುತ್ತೇನೆ" ಎಂದ ಇಂದ್ರ.

"ಸುರೇಶ್ವರ ! ನಾನು ಕೃತಾರ್ಥನಾದೆ. ನಿನ್ನ ಇಚ್ಛೆಯಂತೆ ನನ್ನ ಅಭಿಪ್ರಾಯವನ್ನು ಪ್ರಕಟಿಸಬಹುದೆ" ? ಎಂದು ಋಷಿ ವಿನಂತಿಸಿದ.

"ಆಗಬಹುದು' ಇಂದ್ರನು ಸಂತೋಷದಿಂದ ಹೇಳಿದ

"ನನಗೆ ಯಾವ ಭೌತಿಕ ವಿಷಯದಲ್ಲಿಯೂ ಆಸಕ್ತಿ ಇಲ್ಲ. ಸಾಂಸಾರಿಕ ಸುಖದಲ್ಲಿ ವಿರಕ್ತಿ ಉಂಟಾಗಿದೆ' ಎಂದ ಋಷಿ

"ಋಷಿವರ್ಯರೆ ! ನೀವು ಕೇಳದೆ ನಾನು ಹೇಗೆ ಹೇಳಲಿ ?"

ಋಷಿ ನಮಸ್ಕರಿಸಿದ

"ಮಹಾತ್ಮರೆ ! ನಿಮ್ಮ ಇಚ್ಛೆಯನ್ನು ಪೂರ್ತಿಗೊಳಿಸುವೆ ಹೇಳಿ ಏನು ಬೇಕು?"

'ಇಂದ್ರನೇ ! ನನಗೆ ಮಧುವಿದ್ಯೆಯನ್ನು ತಿಳಿಸು

"ಮಧು" ಚಕಿತಗೊಂಡ ಇಂದ್ರ

"ಹೌದು ಸುರೇಶ್ವರ', ಎಂದು ನಿಶ್ಚಯ ಬುದ್ಧಿಯಿಂದ ಉತ್ತರಿಸಿದ ಋಷಿ

"ತಪಸ್ವೀ ! ಇದು ದುರ್ಲಭ' ಎಂದು ಗಂಭೀರವಾಗಿ ಹೇಳಿದ

"ತಮ್ಮ ಕೃಪೆ ಇದ್ದರೆ ಎಲ್ಲವೂ ಸುಲಭ'

ಇಂದ್ರನು ಯೋಚಿಸತೊಡಗಿದ. ಮಧುವಿದ್ಯೆಯನ್ನು ತಿಳಿಸಬಾರದೆಂದು ಸ್ವಲ್ಪ ತಡೆದ

"ನಾನು ರಹಸ್ಯವನ್ನು ಹೇಳುತ್ತೇನೆ ಆದರೆ ಒಂದು ಷರತ್ತಿನ ಮೇಲೆ"

"ನಾನು ಅನುಮೋದಿಸುತ್ತೇನೆ"

ಇಂದ್ರ ಆಕಾಶವನ್ನೊಮ್ಮೆ ನೋಡಿದ,

"ಪ್ರತಿಜ್ಞೆ ಏನೆಂದು ತಿಳಿಯಬಹುದೋ' ? ಇಂದ್ರನನ್ನು ನೋಡುತ್ತಾ ಕೇಳಿದ ಋಷಿ"

"ಈ ರಹಸ್ಯವನ್ನು ನೀವು ಬೇರೆ ಯಾರಿಗಾದರೂ ತಿಳಿಸಿದರೆ ನಿಮ್ಮ ಶಿರಸ್ಸು ಹೋಳಾಗುತ್ತದೆ' ಇಂದ್ರನು ವಜ್ರಾಯುಧವನ್ನು ತಿರಿಗಿಸುತ್ತಾ ಹೇಳಿದ

"ಭಗವಂತ ! ನಿನ್ನ ಷರತ್ತನ್ನು ಸ್ವೀಕರಿಸಿದ್ದೇನೆ ಅದನ್ನು ಉಲ್ಲಂಘಿಸಲಾರೆ" ಎಂದು ದೃಢಮನಸ್ಸಿನಿಂದ ಹೇಳಿದ ಋಷಿ

ಇಂದ್ರನು ದಧ್ಯಂಚನಿಗೆ ಮಧುವಿದ್ಯೆಯನ್ನು ಉಪದೇಶಿಸಿದ ಋಷಿಯು ಅದನ್ನು ಕೇಳಿ ಹರ್ಷಚಿತ್ತನಾದ

ಮೂರುಲೋಕಗಳಲ್ಲಿಯೂ ಯಾರಿಗೂ ಮಧುರಹಸ್ಯ ಗೊತ್ತಿರಲಿಲ್ಲ. ದೇವ

ಗಳು, ರಾಕ್ಷಸರು, ಪ್ರಾಣಿಗಳೂ ಸಹ ಮಧುವಿದ್ಯೆಯ ಅಪೇಕ್ಷಿಗಳೇ ಬಹಳ ವಿಚಾರ ವಿನಿಮಯಗಳಾದವು ಅದನ್ನು ಪಡೆಯಲು ಸಂಶೋಧನೆ ನಡೆಯುತ್ತಿತ್ತು ಈ ವಿದ್ಯೆಯನ್ನು ಇಂದ್ರ ಮಾತ್ರ ತಿಳಿದಿದ್ದ. ಅದನ್ನು ಬೇರೆಯವರಿಗೆ ತಿಳಿಸಲು ಇಚ್ಛಿಸಲಿಲ್ಲ. ದಧ್ಯಂಚನಿಗೆ ಇಂದ್ರನು ಮಧುವಿದ್ಯೆಯ ರಹಸ್ಯವನ್ನು ತಿಳಿಸಿದ ವಿಷಯ ಅಶ್ವಿನೀ ಕುಮಾರರಿಗೆ ತಿಳಿಯಿತು ಇಂದ್ರ ಹಾಗೂ ಅಶ್ವಿನೀಕುಮಾರರಲ್ಲಿ ದ್ವೇಷವಿತ್ತು

ಇಂದ್ರನಿಂದ ಅಶ್ವಿನೀಕುಮಾರರು ಬಹಿಷ್ಕೃತರಾಗಿದ್ದರು ಇವರು ಯಜ್ಞಗಳಲ್ಲಿ ಭಾಗವಹಿಸುವಂತಿರಲಿಲ್ಲ ಬಹಳದಿನಗಳಿಂದ ಚಿಂತಾಕ್ರಾಂತರಾಗಿದ್ದರು ಒಂದು ಪಕ್ಷ ಮಧುವಿದ್ಯೆಯ ರಹಸ್ಯವನ್ನು ತಿಳಿದರೆ ಅದರ ಗುಣ ಮತ್ತು ಶಕ್ತಿಯಿಂದ ಯಜ್ಞಗಳಲ್ಲಿ ಭಾಗವಹಿಸಲು ಅಧಿಕಾರಿಗಳಾಗುತ್ತಿದ್ದರು ಮಧುವಿದ್ಯೆಯ ಕಾರಣದಿಂದ ಸೋಮಪಾನದಲ್ಲಿ ಅಧಿಕಾರಿಗಳಾಗುತ್ತಿದ್ದರು ಆದುದರಿಂದ ಮಧುವಿದ್ಯೆಯನ್ನು ತಿಳಿಯಲು ದಧ್ಯಂಚನ ಆಶ್ರಮಕ್ಕೆ ಹೋದರು

ಮಹರ್ಷಿಗಳು ತಪೋಮಗ್ನರಾಗಿದ್ದರು ಅಶ್ವಿನೀಕುಮಾರರು ನಿಧಾನವಾಗಿ ಆಶ್ರಮ ಪ್ರವೇಶಿಸಿದರು ಋಷಿಗಳು ಅವರನ್ನು ಗುರುತಿಸಿ ಎದ್ದು ಕುಮಾರರನ್ನು ಅಭಿನಂದಿಸಿದರು ಅವರನ್ನು ಅರ್ಘ್ಯ ಪಾದ್ಯ ಮಧುಪರ್ಕಾದಿಗಳಿಂದ ಸ್ವಾಗತಿಸಿ ಕುಳಿತುಕೊಳ್ಳಲು ಕುಶಾಸನವನ್ನು ಕೊಟ್ಟರು

"ಅಶ್ವಿನೀಕುಮಾರರೇ, ತಮ್ಮ ಆಗಮನವು ಯಾವ ಉದ್ದೇಶಕ್ಕಾಗಿ ಎಂದು ತಿಳಿಯಬಹುದೇ ?"

"ಮಹಾತ್ಮರೆ ! ಒಂದು ವಿಶೇಷ ಪ್ರಯೋಜನಕ್ಕಾಗಿ ನಿಮ್ಮ ಆಶ್ರಮಕ್ಕೆ ಬಂದಿದ್ದೇವೆ ಪ್ರಯೋಜನದ ಸಿದ್ಧಿ ತಮ್ಮ ಕೈಯಲ್ಲಿದೆ ಇದೇ ನಮ್ಮ ರಹಸ್ಯವಾದ ಇಚ್ಛೆ ಎಂದರು ಕುಮಾರರು

"ಅಶ್ವಿನಿಗಳೆ! ಅತಿಥಿಗಳ ಇಚ್ಛೆಯನ್ನು ಪೂರ್ಣಗೊಳಿಸುವುದೇ ಆತಿಥೇಯನ ಕರ್ತವ್ಯವೆಂದು ತಿಳಿಯುತ್ತೇವೆ"

"ಸತ್ಯ ಮಹಾತ್ಮರೆ, ಇದೇ ಪ್ರಾಚೀನಪರಂಪರೆ" ಎಂದು ಸಂತಸದಿಂದ ಹೇಳಿದರು

"ನಿಮ್ಮಲ್ಲಿ ಒಂದು ಗುಣವಿದೆ. ಅದು ನಮಗೆ ಬೇಕು" ಎಂದರು

"ದೇವಗಣಗಳೇ ನನ್ನಲ್ಲಿದ್ದರೆ, ಅದನ್ನು ನಿಮಗೆ ಕೊಟ್ಟು ಕೃತಕೃತ್ಯನಾಗುತ್ತೇನೆ" ಎಂದರು ಋಷಿಗಳು

"ತಮ್ಮಲ್ಲಿದೆ"

"ಇದ್ದರೆ ಕೊಡುತ್ತೇನೆ"

"ಮಹಾತ್ಮರೆ, ತಮ್ಮಲ್ಲಿರುವ ಮಧುವಿದ್ಯೆಯ ರಹಸ್ಯ ಉದ್ಘಾಟನೆಯಾಗಬೇಕು"

ಋಷಿಯು ನಿಶ್ಚೇಷ್ಟಿತನಾದ ಅಶ್ವಿನೀಕುಮಾರರಿಗೆ ಈ ರಹಸ್ಯ ತಿಳಿದಿದೆ ಎಂಬ ಆಲೋಚನೆಯೂ ಇರಲಿಲ್ಲ

"ಮಧು" ಉದಾಸೀನಭಾವದಿಂದ ಹೇಳಿದ ಋಷಿ

"ಋಷಿವರ್ಯರೆ ಇಂದ್ರನು ನಿಮಗೆ ಹೇಳಿದ್ದಾನೆ

"ತಮಗೆ ಹೇಗೆ ತಿಳಿಯಿತು ?"

"ದಾನಿಯ ಸಾಮರ್ಥ್ಯವನ್ನು ತಿಳಿದೇ ಯಾಚಕರು ಯಾಚಿಸುತ್ತಾರೆ "

"ಆದರೆ .!'

ಋಷಿಗಳೆ ! ಇದೇ ನಮ್ಮ ಬೇಡಿಕೆ ಈ ಇಚ್ಛೆಯಿಂದಲೇ ನಾವು ನಿಮ್ಮಲ್ಲಿಗೆ ಬಂದಿದ್ದೇವೆ

"ಆದರೆ !"

"ಯಾಚಕರನ್ನು ಬಾಗಿಲಿನಿಂದ ಹಿಂದಕ್ಕೆ ಬರಿಗೈಲಿ ಕಳುಹಿಸುವುದು ಧರ್ಮವಲ್ಲ'

"ಆದರೆ !'

'ದಾನಧರ್ಮದಿಂದ ತಾವು ಹೇಗೆ ವಿಮುಖರಾಗುತ್ತೀರಿ ?'

"ಆದರೆ

"ಮಹಾತ್ಮರೆ ಈ ಗುಟ್ಟನ್ನು ರಟ್ಟು ಮಾಡಿದರೆ ನಿಮ್ಮ ಶಿರಸ್ಸು ಹೋಳಾಗುತ್ತದೆಂದು ನಿಮ್ಮಿಂದ ವಚನ ತೆಗೆದುಕೊಂಡಿರುವುದು ನಮಗೆ ಗೊತ್ತು "

"ಹೌದು, ಆದರೆ !

"ಮಹಾತ್ಮರ! ತಮಗೆ ಅಕಾಲ ಮೃತ್ಯುವಾಗಲಾರದು ನಾವು ವೈದ್ಯರು ಮತ್ತು ಶಲ್ಯಚಿಕಿತ್ಸಕರು '

"ಆದರೆ

"ಋಷಿಗಳೇ ! ಇಂದ್ರ ನಿಮ್ಮನ್ನು ಏನೂ ಮಾಡಲಾರ ನಿಮಗೆ ಯಾವ ಹಾನಿಯೂ ಆಗಲಾರದು

"ಆದರೆ . "

"ಋಷಿಗಳೆ ! ನಾವು ಒಂದು ಉಪಾಯವನ್ನು ಹುಡುಕಿದ್ದೇವೆ '

ಋಷಿಗಳ ತೀಕ್ಷ್ಣ ದೃಷ್ಟಿ ಅಶ್ವಿನೀಕುಮಾರರ ಮೇಲೆ ಬಿತ್ತು

"ಸಾಧಾರಣ ವಿಷಯ ತಮ್ಮ ಮಸ್ತಕವನ್ನು ಕತ್ತರಿಸಿ ಬೇರೆ ಇಡುತ್ತೇವೆ ಅದರ ಜಾಗದಲ್ಲಿ ಕುದುರೆ ಮುಖವನ್ನು ಇಡುತ್ತೇವೆ ಕುದುರೆ ಮುಖದಿಂದ ಮಧು ರಹಸ್ಯವನ್ನು ನೀವು ಹೇಳಬಹುದು ಇಂದ್ರ ಬಂದು ನಿಮ್ಮ ಶಿರಸ್ಸನ್ನು ಹೋಳು ಮಾಡುತ್ತಾನೆ ಅದು ನಿಮ್ಮ ಅಶ್ವಮುಖವಾಗುತ್ತದೆ. ನಾವು ನಿಮ್ಮ ಪೂರ್ವದ ಮಾನವ ಮಸ್ತಕವನ್ನು ಜೋಡಿಸುತ್ತೇವೆ '

ಋಷಿ ಗಂಭೀರನಾದ

"ಮಹಾತ್ಮರೆ ! ಇದರಲ್ಲಿ ಚಿಂತಿಸಬೇಕಾದು ಏನೂ ಇಲ್ಲ ನಿಮ್ಮ ವಚನದ ಉಲ್ಲಂಘನವಾಗುವುದಿಲ್ಲ ಮಾನವ ಮಸ್ತಕದ ಜಾಗದಲ್ಲಿ ನಾವು ಅಶ್ವ ಮಸ್ತಕವನ್ನು ಇಡುತ್ತೇವೆ ನೀವು ಯಾವ ಮಸ್ತಕದಿಂದ ವಚನ ಕೊಟ್ಟಿದ್ದೀರೋ ಅದು

ದೋಷಿಯಾಗುವುದಿಲ್ಲ ಅದು ಅಶ್ವ ಮಸ್ತಕವಾಗುತ್ತದೆ ಅನಂತರ ಅದನ್ನು ಕತ್ತರಿಸಿ ಪುನಃ ಮಾನವ ಮಸ್ತಕವನ್ನು ಯಥಾಸ್ಥಾನದಲ್ಲಿ ಇಡುತ್ತೇವೆ. ಅಶ್ವ ಮಸ್ತಕವೇ ದೋಷಿಯಾಗುತ್ತದೆ "

ಋಷಿಗಳು ಪ್ರಸನ್ನರಾದರು

"ಇನ್ನೊಂದು ವಿಷಯವೆಂದರೆ ತಾವು ನಮ್ಮ ಪ್ರಾರ್ಥನೆಯನ್ನು ಪೂರೈಸುವು ದಾಗಿ ವಚನ ಕೊಟ್ಟಿದ್ದೀರಿ ಅದರಂತೆ ತಮ್ಮ ವಚನ ಪೂರ್ತಿಯಾಗುತ್ತದೆ ಇದ ರಿಂದ ತಾವು ವಚನ ಭ್ರಷ್ಟರಾಗುವುದಿಲ್ಲ ಮತ್ತು ನಮ್ಮ ಪ್ರಾರ್ಥನೆಯನ್ನು ಪೂರೈಸಿ ದಂತಾಗುತ್ತವೆ."

"ಅಶ್ವಿನಿಗಳೆ ! ನಿಮ್ಮ ಅಭಿಪ್ರಾಯ ನಮಗೆ ಒಪ್ಪಿಗೆ" ಎಂದು ಋಷಿಗಳು ಸಂತಸಗೊಂಡರು

ಅಶ್ವಿನೀ ಕುಮಾರರು ದಧ್ಯಂಚನ ಶಿರಸ್ಸನ್ನು ಕತ್ತರಿಸಿದರು ಅದರ ಸ್ಥಳದಲ್ಲಿ ಶೀಘ್ರವಾಗಿ ಅಶ್ವಮುಖವನ್ನು ಜೋಡಿಸಿದರು ದಧ್ಯಂಚನು ಪ್ರಸನ್ನನಾದ ಅವನ ಚೈತನ್ಯವು ಮನುಷ್ಯ ಚೈತನ್ಯದಂತೆ ಇದ್ದಿತು ಅದರಲ್ಲಿ ಯಾವ ಭೇದವೂ ಕಾಣಲಿಲ್ಲ ಅವನು ಹಯಗ್ರೀವನಂತೆ ಕಾಣುತ್ತಿದ್ದ ಗುರುವಾಗಿ ಋಷಿಯು ಕುಶಾಸನದಲ್ಲಿ ಕುಳಿತ ಶಿಷ್ಯರಾಗಿ ಅಶ್ವಿನಿಗಳು ಕುಶಾಸನದಲ್ಲಿ ಕುಳಿತರು ದಧ್ಯಂಚನು ಅಶ್ವಿನೀ ಕುಮಾರರಿಗೆ ಮಧುವಿದ್ಯೆಯ ರಹಸ್ಯವನ್ನು ಉಪದೇಶಿಸಿದ

ಮಧುವಿದ್ಯೆಯ ರಹಸ್ಯ ಬಯಲಾಗುತ್ತಲೇ ಇಂದ್ರ ಸಿಟ್ಟಾದ ಋಷಿಯು ವಚನ ಭ್ರಷ್ಟನಾದುದರಿಂದ ವ್ಯಗ್ರನಾದ ವಜ್ರಾಯುಧವನ್ನು ಹಿಡಿದು ಹೊರಟ ಕ್ರೂರ ವಜ್ರಾಯುಧವನ್ನು ನೋಡಿ ಋಷಿ ಚೀತ್ಕಾರ ಮಾಡಿದ

"ಅಶ್ವಿನೀ ಕುಮಾರರೇ ! ನನ್ನ ಶಿರಸ್ಸು ಕತ್ತರಿಸಲ್ಪಡುತ್ತಿದೆ"

"ಮಹಾತ್ಮರೇ ! ಚಿಂತಿಸಬೇಡಿ ನಾವಿದ್ದೇವೆ" ಎಂದರು

ವಜ್ರಪ್ರಹಾರದಿಂದ ಋಷಿಯ ಅಶ್ವ ಶಿರಸ್ಸು ಕತ್ತರಿಸಲ್ಪಟ್ಟಿತು ಅದು ಬಹು ದೂರದ ಪರ್ವತ ಪ್ರದೇಶದಲ್ಲಿದ್ದ ಶರ್ಯಣಾವೃತ ಸರೋವರದಲ್ಲಿ ಬಿದ್ದಿತು ವಿಳಂಬಿ ಸದೆ ಅಶ್ವಿನೀ ಕುಮಾರರು ಋಷಿಯ ಶರೀರದ ಮೇಲೆ ಮಾನವನ ಶಿರಸ್ಸನ್ನು ಜೋಡಿಸಿದರು ಋಷಿಯು ಮೊದಲಿನ ಹಾಗೆ ವ್ಯವಹರಿಸಲು ಸಮರ್ಥನಾದ ಮಾತನಾಡಲು ಪ್ರಾರಂಭಿಸಿದ

ಅಶ್ವಿನೀ ಕುಮಾರರ ಕುಶಲತೆಯನ್ನು ನೋಡಿ ವಿಶ್ವವು ಆಶ್ಚರ್ಯಗೊಂಡಿತು

"ಮಹಾತ್ಮರೆ ! ತಾವು ಮತ್ತು ನಾವುಗಳು ಕೊಟ್ಟ ಮಾತಿಗೆ ಬದ್ಧರಾದೆವು ತಾವು ಗೌರವಕ್ಕೆ ಪಾತ್ರರಾದಿರಿ ನಾವು ಅನುಗೃಹೀತರಾದವು" ಎಂದು ನಮಸ್ಕರಿ ಸುತ್ತಾ ಹೇಳಿದರು

ಅಶ್ವಿನೀ ಕುಮಾರರು ಶ್ರದ್ಧೆಯಿಂದ ವಂದಿಸಿದರು ಋಷಿಯು ಅವರನ್ನು ಬೀಳ್ಕೊಡಲು ಆಶ್ರಮದ ಅಂಚಿನವರೆವಿಗೂ ಹೋಗಿ ಪುಷ್ಪಸಹಿತರಾಗಿ

ಬೀಳ್ಕೊಟ್ಟನು.

ಅಶ್ವಿನೀ ಕುಮಾರರು ಮಧು ಶಕ್ತಿಯ ಪರಿಣಾಮದಿಂದ ಯಜ್ಞದಲ್ಲಿ ಪಾಲ್ಗೊಂಡರು. ಯಜ್ಞ ಭಾಗವು ಅವರಿಗೆ ಸಿಕ್ಕಿತು ಅವರ ಅಸ್ತಿತ್ವವು ದೇವ ಸಮೂಹದಲ್ಲಿ ವೃದ್ಧಿ ಹೊಂದಿತು ಇಂದ್ರನು ಪ್ರತಿಹಿಂಸೆಗೆ ಉದ್ಯುಕ್ತನಾಗಲಿಲ್ಲ

ಇತ್ತ ದಧ್ಯಂಚ ಋಷಿಯು ಕುಶಾಸನದಲ್ಲಿ ಕುಳಿತಿದ್ದ ಅವನ ದೃಷ್ಟಿ ತೇಜೋಮಯವಾಗಿತ್ತು ಅವನಿಗೆ ದಿವ್ಯ ಮಂತ್ರಗಳ ದರ್ಶನವಾಗತೊಡಗಿತು ಅವನ ವಾಕ್‌ಶಕ್ತಿ ಜಾಗೃತವಾಯಿತು. ಶುದ್ಧ ಕಂಠದಿಂದ ಸಸ್ವರವಾಗಿ ಋಕ್ಕುಗಳು ಹೊರ ಹೊಮ್ಮಿದವು ವಾಯು ಮಂಡಲವು ವೇದ ಧ್ವನಿಯಿಂದ ತುಂಬಿತು ಒಬ್ಬ ಸೂಕ್ತ ದ್ರಷ್ಟ, ಯಾಜ್ಞಿಕ, ಅಗ್ನಿಯಂತೆ ಪ್ರಜ್ವಲಿಸುವ ಋಷಿಯನ್ನು ಜಗತ್ತು ನೋಡಿತು

ತನ್ನ ಕಥೆಯನ್ನು ಹೇಳುತ್ತಾ ಅವನ ಅಶ್ವ ಶಿರಸ್ಸು ಎಲ್ಲಿ ಬಿದ್ದಿದ್ದಿತೋ ಅದು ಶರ್ಯಾವತ ತೀರ್ಥವಾಯಿತು.

## ಆಧಾರ ಗ್ರಂಥ

ಋಗ್ವೇದ ೧-೮೦,೧೬, ೧-೮೪-೧೩,೧೪, ೧-೧೧೬,೧೨, ೧-೧೨-೨೨, ೧-೧೩೯-೯, ೬-೧೬-೮

ಶತಪಥ ಬ್ರಾಹ್ಮಣ ೧೪-೧-೧,೧೮-೨೫, ೪-೧-೫-೧೮, ೬-೪-೨-೩, ೧೪-೧-೧-೧-೮-೩೬

ತಾಂಡ್ಯ ಬ್ರಾಹ್ಮಣ ೧-೮೦-೧೬.

ಗೋಪಥ ಬ್ರಾಹ್ಮಣ ೧-೫-೨೧

ಬೃಹದ್ದೇವತಾ . ೩-೧೮-೨೭

**ಟಿಪ್ಪಣಿ** ಆಧುನಿಕ ಸರ್ಜರಿ ಅಂದರೆ ಶಲ್ಯ ಚಿಕಿತ್ಸೆ ಬಹಳ ವಿಕಾಸ ಹೊಂದಿದ ಎಂದು ತಿಳಿಯುತ್ತಾರ ಆದರೆ ವೈದಿಕ ಕಾಲದ ಶಲ್ಯ ಚಿಕಿತ್ಸೆ ಕಡಿಮೆಯೇನಿಲ್ಲ ಅಶ್ವಿನೀ ಕುಮಾರರು ಶಲ್ಯ ಹಾಗೂ ವೈದ್ಯ ಚಿಕಿತ್ಸೆಯ ಆಚಾರ್ಯರೆಂದು ತಿಳಿಯಲಾಗಿದೆ ಆಧುನಿಕ ಕಾಲದ ಸರ್ಜರಿ ಗ್ರಾಫ್ಟಿಂಗ್‌ನಂತೆ ಹಿಂದಿನ ಕಾಲದಲ್ಲಿಯೂ ಸರ್ಜರಿ ಕಾರ್ಯ ನಡೆಯುತ್ತಿತ್ತು ದಧ್ಯಂಚನ ಶಿರಸ್ಸನ್ನು ಕತ್ತರಿಸಿ ಅದರ ಜಾಗದಲ್ಲಿ ಅಶ್ವ ಶಿರಸ್ಸನ್ನು ಅಶ್ವಿನೀ ಕುಮಾರರು ಜೋಡಿಸಿದ್ದರು ಹಿಂದಿನ ಮಾನವ ಮಸ್ತಕದಂತೆ ಆ ಅಶ್ವಮುಖ ಕೆಲಸ ಮಾಡುತ್ತಿತ್ತು, ಈ ವಿಷಯವನ್ನು ಕಥಾರೂಪದಲ್ಲಿ ವೇದದಲ್ಲಿ ವಿವರಿಸಲಾಗಿದ

**ಅಶ್ವಿನೀ ಕುಮಾರರು :** ಇವರು ದೇವತೆಗಳ ಚಿಕಿತ್ಸಕರು ಶಕ್ತಿ ಶಾಲಿಗಳು ಇವರನ್ನು ನಾಸತ್ಯರೆಂದು ಕರೆಯುತ್ತಾರೆ ಇವರು ನಾಸಿಕದಿಂದ ಹುಟ್ಟಿದವರು ವಿಚಿತ್ರ ಕರ್ಮಿಗಳು. ತಂದೆ ವಿವಸ್ವಾನ್, ತಾಯಿ ಶರಣ್ಯ ಅಶ್ವಿನೀ ರೂಪ ತಾಳಿದ

ಶರಣ್ಯುವಿನ ನಾಸಿಕದಿಂದ ಹುಟ್ಟಿದವರು. ಅವಳೀ ಸಹೋದರರು. ಯಾವಾಗಲೂ ಜೊತೆಯಲ್ಲಿರುವವರು ಕುಶಲರಾದ ಶಲ್ಯಚಿಕಿತ್ಸಕರು ಚಿರಯುವಕರು.

ಇಂದ್ರ ವೈದಿಕ ಆರ್ಯರ ದೇವತೆ, ಅದ್ಭುತ ಪರಾಕ್ರಮಿ, ಅಂತರಿಕ್ಷ ದೇವತೆ

**ದಧ್ಯಂಚ :** ಅಥರ್ವಣ್ಣನ ಮಗ. ಅಥರ್ವಣ್ಣನು ವೈದಿಕ ಕರ್ಮಕಾಂಡದ ಬೆಳವಣಿಗೆಯಲ್ಲಿ ಬಹಳ ಶ್ರಮಿಸಿದ್ದನೆ ಇವನನ್ನು ಅಥರ್ವಣ ಎಂದು ಕರೆಯುತ್ತಾರೆ

ಶ್ರೀ ಶ್ರೀ ಶ್ರೀ

# ಚ್ಯವನ-ಸುಕನ್ಯೆ

ವಿಚಾರವಂತನಾದ ಶರ್ಯಾತ ಮಹಾರಾಜನು ಬೇಟೆಗಾಗಿ ತಾತ್ಕಾಲಿಕವಾಗಿ ತನ್ನ ಶಿಬಿರವನ್ನು ಒಂದು ಕಡೆ ಹಾಕಿದ್ದ ಅಲ್ಲಿ ಜನರ ಕಲರವಿತ್ತು ಶರ್ಯಾತನು ಸಕುಟುಂಬಿಯಾಗಿ ಬಂದಿದ್ದ ಪುತ್ರಿ ಸುಕನ್ಯ ಅಲ್ಲದೆ ಇತರ ಮಕ್ಕಳು ಅವನ ಜೊತೆಯಲ್ಲಿ ಬಂದಿದ್ದರು ತನ್ನ ಅವಶ್ಯಕತೆಗಳನ್ನು ಪೂರೈಸುವ ಸ್ಥಳ ಅದಾಗಿತ್ತು

ಶಿಬಿರದ ಸ್ಥಾಪನೆಯಾಗಿತ್ತು ಮಕ್ಕಳು ಆಟವಾಡುತ್ತಿದ್ದರು ಆಟವಾಡುತ್ತಾ ಮಣ್ಣಿನಿಂದ ಮುಚ್ಚಿದ್ದ ಒಂದು ಮಾನವಾಕೃತಿಯನ್ನು ನೋಡಿದರು ಅದು ಅವರಿಗೆ ಕುತೂಹಲ ವಸ್ತುವಾಗಿ ಕಂಡಿತು ಹುಡುಗಾಟಿಕೆಯಿಂದ ಅದರ ಮೇಲೆ ಕಲ್ಲುಗಳ ಮಳೆಗರೆದರು.

ಶರ್ಯಾತನ ಶಿಬಿರದಲ್ಲಿ ವಿಚಿತ್ರ ಪರಿಸ್ಥಿತಿ ಉಂಟಾಯಿತು ಅಲ್ಲಿ ವಿದ್ರೋಹ ಉಂಟಾಯಿತು ಕಾರಣವಿಲ್ಲದೆ ಜನಗಳು ಪರಸ್ಪರ ಹೊಡೆದಾಡಲು ಪ್ರಾರಂಭಿಸಿದರು ತಂದೆ ಮಕ್ಕಳಿಗೆ. ತಾಯಿ ಪುತ್ರಿಯರಿಗೆ, ತಮ್ಮ ತಮ್ಮಲ್ಲೇ ದ್ವೇಷ ಬೆಳೆಯಿತು ಸಹೋದರರು ತಮ್ಮ ತಮ್ಮಲ್ಲೇ ಹೊಡೆದಾಡಲು ಉದ್ಯುಕ್ತರಾದರು

ಶರ್ಯಾತನಿಗೆ ಚಿಂತೆಯಾಯಿತು ಶಾಂತಿಯನ್ನು ಕಳೆದುಕೊಂಡ ಏನೋ ಎಲ್ಲಿಯೋ ಆಗಬಾರದ್ದು ಆಗಿದೆ. ಎಲ್ಲಿಯೋ ಪಾಪ ಉಂಟಾಗಿದೆ. ಯಾರಿಂದಲೋ ಅಪರಾಧವಾಗಿದೆ ಮಾಡಬಾರದ್ದನ್ನು ಮಾಡಿದ್ದಾರೆ ಭಗವಂತನು ಈ ರೀತಿ ಅರಾಜಕತೆಯನ್ನು ಉಂಟುಮಾಡಿ ಶಿಕ್ಷೆ ಕೊಡುತ್ತಿದ್ದಾನೆ ಎಂದು ಆಲೋಚಿಸಿದ

ಶರ್ಯಾತನಿಗೆ ಯಾವ ಅನುಚಿತ ಅವ್ಯವಹಾರಿಕವಾದ ಆಚರಣೆಯು ಸುಳಿವು ಕಾಣಲಿಲ್ಲ ಯಾವ ಕಾರಣದಿಂದ ಈ ಅಪರಾಧವನ್ನು ಅನುಭವಿಸುತ್ತಿದ್ದೇನೆ ? ಎಂದು ತಿಳಿಯಲಿಲ್ಲ. ಅವನು ತನ್ನ ಅನುಚರರಾದ ಗೋಪಾಲಕರನ್ನು ಕರೆಸಿದ.

"ಈ ಅವ್ಯವಸ್ಥೆಯನ್ನು ನೀವು ನೋಡುತ್ತಿದ್ದೀರಲ್ಲವೆ ? ಕೆಲವು ವಿಚಿತ್ರವಾದ ಘಟನೆಗಳು ಅನಾಯಾಸವಾಗಿ ಜರುಗುತ್ತಿವೆ ಪ್ರಜೆಗಳಿಗೆ ನೆಮ್ಮದಿ ಇಲ್ಲದಂತಾಗಿದೆ. ವಿನಾಕಾರಣ ಜಗಳಕ್ಕೆ ಎಲ್ಲಾ ಸಿದ್ಧರಾಗಿದ್ದಾರೆ ಇದಕ್ಕೆ ಕಾರಣ ನಿಮಗೆ ಯಾರಿಗಾದರೂ ತಿಳಿದಿದೆಯೋ ? ಅನುಚಿತ ಕಾರ್ಯವಾಗಿದೆಯೋ ? ಎಂದು ಶರ್ಯಾತ ಕೇಳಿದ.

"ಸ್ಪಷ್ಟವಾಗಿ ಯಾವುದೂ ಇಲ್ಲ" ಎಂದರು

ಶರ್ಯಾತನು ಚಿಂತೆಯಲ್ಲಿ ಮುಳುಗಿದ ಅವನ ಜೊತೆಯಲ್ಲಿಯೇ ಗೋಪಾಲಕರೂ ಚಿಂತಿತರಾದರು ಅವರಲ್ಲಿ ಒಬ್ಬ "ನನಗೆ ಸ್ಮರಣೆಗೆ ಬಂದಿತು ಇಲ್ಲಿ ಜೀರ್ಣವಾದ ಪುರುಷಾಕೃತಿಯಂತೆ ಒಂದು ವಲ್ಮೀಕವಿದೆ ಕುಮಾರರು ಕುತೂಹಲದಿಂದ ಅದನ್ನು ಘಾಸಿಮಾಡಿದರು ಪ್ರಾಯಃ ಆ ತಪಸ್ವಿಯ ಕ್ರೋಧದ ಪರಿಣಾಮವೇ ಇದು ಇರಬಹುದೆಂದ !

"ನಿಜವಿರಬಹುದು" ಶರ್ಯಾತನಿಗೆ ಒಂದು ಅವಕಾಶ ಸಿಕ್ಕಿತು ರಥವನ್ನು ತಿರಲು ಹೇಳಿದ ಆ ರಥದಲ್ಲಿ ಪುತ್ರಿಯೊಡನೆ ಋಷಿ ಇದ್ದೆಡೆಗೆ ಹೋದ ವೇದ ವೇದಾಂಗಗಳಲ್ಲಿ ಪರಿಣತನಾದ ಚ್ಯವನ ಋಷಿಗೆ ವಂದಿಸಿದ ಜೀರ್ಣವಾದ ಮಣ್ಣಿನಿಂದ ಕೂಡಿದ ಶರೀರದಲ್ಲಿ ಸ್ವಲ್ಪ ಚಲನೆ ಉಂಟಾಯಿತು.

"ಭಗವನ್ ! ಈ ಅಲ್ಪನ ಹೆಸರು ಶರ್ಯಾತ ಇಲ್ಲಿಗೆ ಸಮೀಪದಲ್ಲಿಯೇ ನನ್ನ ಶಿಬಿರವಿದೆ" ಎಂದ

ಋಷಿ ಕಣ್ಣು ತೆರೆದ ಅವನ ಶರೀರ ಹುಡುಗರ ಕಲ್ಲೇಟಿನಿಂದ ಘಾಸಿಯಾಗಿತ್ತು ಋಷಿಯು ಶರ್ಯಾತನ ವಿನಯಕ್ಕೆ ಮಾರು ಹೋದ ಅವನ ಕೋಪ ಶಾಂತವಾಯಿತು ಶರ್ಯಾತನು ತನ್ನ ಮಗಳು ಸುಕನ್ಯೆಯನ್ನು ಅವನ ಸಮ್ಮುಖಕ್ಕೆ ಕರೆತಂದು

"ಋಷಿಗಳೆ ! ಇವಳು ನನ್ನ ಪುತ್ರಿ ಹೆಸರು ಸುಕನ್ಯೆ" ಸುಕನ್ಯೆ ಋಷಿಯ ಪಾದಮುಟ್ಟಿ ನಮಸ್ಕರಿಸಿದಳು. ಒಣಗಿದ ಜೀರ್ಣವಾದ ಶರೀರವನ್ನು ಯುವ ಕಾಯವು ಸ್ಪರ್ಶಿಸಿತು ಅವರಿಬ್ಬರ ಆಯುವಿನಲ್ಲಿ ಅಂತರ ಎಷ್ಟೆಂಬುದು ಗೊತ್ತಾಗುತ್ತಿತ್ತು ಋಷಿ ಸುಕನ್ಯೆಯನ್ನು ನೋಡಿ ಪ್ರಸನ್ನನಾದ

"ಮುನಿಗಳೆ ! ಮಕ್ಕಳು ತಮಗೆ ತೊಂದರೆ ಮಾಡಿದ್ದಾರೆ ಕ್ಷಮಿಸಿ" ಎಂದು ಕೈ ಮುಗಿದು ಕೇಳಿಕೊಂಡ ಋಷಿ ತನ್ನ ಶರೀರದ ಘಾಯಗಳನ್ನು ನೋಡಿಕೊಂಡನು

"ಮಹಾತ್ಮರೆ ! ಈ ಕನ್ಯೆಯನ್ನು ತಾವು ಸ್ವೀಕರಿಸಿ. ಇದರಿಂದ ನಮ್ಮ ಪಾಪಕ್ಕೆ ಪ್ರಾಯಶ್ಚಿತ್ತವಾಗಲಿ ಇವಳು ತಮ್ಮ ಸೇವೆಯನ್ನು ಮಾಡುತ್ತಾಳೆ"

ನಾಚಿಕೆಯಿಂದ ಸುಕನ್ಯೆಯ ಶಿರಬಾಗಿತು ಋಷಿಯು ತನ್ನ ಜೀರ್ಣನೇತ್ರಗಳಿಂದ ಜ್ಯೋತಿಯಿಂತಿರುವ ಯುವತಿಯ ನೇತ್ರಗಳನ್ನು ಅವಲೋಕಿಸಿದ,

ಋಷಿ ಚಿಂತೆಗೊಳಗಾದ.

"ಋಷಿಗಳೆ ! ಗೋತ್ರಗಳ ದ್ವಂದ್ವವಾದರೂ ಇವಳನ್ನು ಸ್ವೀಕರಿಸಿ. ಉಂಟಾಗಿರುವ ಅರಾಜಕತೆಯನ್ನು ನಿಲ್ಲಿಸಿ" ಎಂದು ಪ್ರಾರ್ಥಿಸಿದ. ಋಷಿಯು ಅಭಯ ಮುದ್ರೆಯಿಂದ ಕೈ ಮೇಲೆತ್ತಿದ ಶರ್ಯಾತನಿಗೆ ಸಂತೋಷವಾಯಿತು

"ಮಗಳೆ ! ಚ್ಯವನರು ನಿನ್ನ ಪತಿ ಅವರ ಸೇವೆಯಲ್ಲಿ ನಿನ್ನ ಜನ್ಮ ಸಾರ್ಥಕವಾಗಲಿ. ಶಿಬಿರದಲ್ಲಿ ಶಾಂತಿ ಉಂಟಾಗುತ್ತದೆ ರಕ್ತಪಾತದಿಂದ ಜನರು ಮುಕ್ತರಾಗುತ್ತಾರೆ" ಎಂದ ಸುಕನ್ಯೆಯು ಪತಿದೇವನ ಚರಣಗಳಿಗೆ ಪತ್ನಿಯಾಗಿ ನಮಸ್ಕರಿಸಿದಳು.

  

"ಎಲೈ ಸುಂದರಿ"

ಆಶ್ರಮದಲ್ಲಿ ಒಂಟಿಯಾಗಿ ತಿರುಗಾಡುತ್ತಿದ್ದ ಸುಕನ್ಯೆಯನ್ನು ನೋಡಿ ಅಶ್ವಿನೀ ಕುಮಾರರು ಸಂಬೋಧಿಸಿದರು

ಅತ್ಯಂತ ಸುಂದರ ತೇಜಸ್ವೀ ಯುವಕರನ್ನು ನೋಡಿದಳು ಅವರ ವಿಚಾರವಾಗಿ ಉದಾಸೀನತಾಳಿದಳು ಅವಳ ದೃಷ್ಟಿಯಲ್ಲಿ ತಿರಸ್ಕಾರವಿತ್ತು

"ತನ್ವೀ! ' ನಿನ್ನ ಅನುಪಮ ರೂಪ, ಈ ಯೌವನ, ರತಿಗಿಂತಲೂ ಸುಂದರವಾದ ಶರೀರ, ನೇತ್ರದಲ್ಲಿ ಉಕ್ಕುತ್ತಿರುವ ಕಾಮದ ಮಾದಕತೆ .

"ವ್ಯರ್ಥವಾಗಿ ಏಕೆ ಹರಟುತ್ತೀರಿ ?" ಎಂದು ಸಿಟ್ಟಿನಿಂದ ಹೇಳಿದಳು ಸುಕನ್ಯೆ

"ವ್ಯರ್ಥವಲ್ಲ, ನಿನ್ನ ಯೌವನ ವ್ಯರ್ಥವಾಗಿ ಬಳಲುತ್ತಿದೆ. ದೇವರು ಎಂಥಹ ನಿರ್ದಯಿ ಅವನು ನಿನ್ನ ವಿವಾಹವನ್ನು ಈ ಜೀರ್ಣನಾಗಿರುವ ವೃದ್ಧ, ಶವದಂತಿರುವ ಶರೀರದೊಡನೆ ಮಾಡಿದ್ದಾನೆ" ಎಂದರು ಅಶ್ವಿನಿಗಳು

"ಅವರು ನನ್ನ ದೇವತೆ" ಆಶ್ರಮದ ಕಡೆ ನೋಡುತ್ತಾ ಹೇಳಿದಳು ಸುಕನ್ಯೆ

"ಯುವತಿ ಪುನಃ ವಿಚಾರ ಮಾಡು" ಎಂದು ಮೈಥುನೇಚ್ಛೆಗಳಾದ ಕುಮಾರರು ಕೇಳಿದರು

"ಇಲ್ಲ ತಾವು ಮುಂದೆ ಹೋಗಬಹುದು ಅದರಲ್ಲಿಯೇ ನಿಮಗೆ ಶುಭವಿದೆ" ಎಂದಳು

"ನಿನ್ನ ತಂದೆ ಬಹಳ ನಿರ್ದಯಿ ಈ ವೃದ್ಧನ ಕೊರಳಿಗೆ ನಿನ್ನನ್ನು ಕಟ್ಟುವಾಗ ಅವನಿಗೆ ನಾಚಿಕೆಯಾಗಲಿಲ್ಲವೆ ? ನಿನ್ನ ಕೌಮಾರ್ಯದ ಬಗೆಗೆ ದಯೆ ಬರಲಿಲ್ಲವೆ ?'

"ಕುಮಾರರೆ ! ಅವರು ಎಲ್ಲಿನವರೆವಿಗೆ ಜೀವಿಸಿರುವವರೋ ಅಲ್ಲಿನವರೆವಿಗೂ ಅವರೇ ನನ್ನ ಪತಿ ಅವರನ್ನು ಬಿಡಲು ಸಾಧ್ಯವಿಲ್ಲ ದಯಮಾಡಿ"

"ಲಲಿತಾಂಗಿ ನಮ್ಮ ಕಾಮೇಚ್ಛೆಯನ್ನು ತಿರಸ್ಕರಿಸಬೇಡ" ಎಂದು ಅವಳ ಸಮೀಪ ಬಂದರು.

"ಸಮಯವನ್ನು ವ್ಯರ್ಥಮಾಡುತ್ತಿದ್ದೀರಿ ದಯೆಯಿಟ್ಟು ಮುಂದೆ ಹೋಗಿ"

ಎಂದು ಹೇಳಿ ತನ್ನ ಆಶ್ರಮದ ಕಡೆ ಹೊರಟಳು.

  

"ಸುಕನ್ಯೆ ನಿನ್ನಲ್ಲಿ ಕುಮಾರರು ಏನು ಹೇಳಿದರು" ಹತ್ತಿರ ಬಂದ ಸುಕನ್ಯೆಯನ್ನು ಕೇಳಿದ ಚ್ಯವನ.

"ಕೆಟ್ಟ ವಿಚಾರವದು ಅದನ್ನು ತಿಳಿದು ಏನಾಗಬೇಕು ?" ಎಂದು ವಿಷಾದದಿಂದ ಹೇಳಿದಳು.

"ಅವರು ಪುನಃ ಬರುತ್ತಾರೆಯೋ ?" ಋಷಿ ಕೇಳಿದ

"ಯಾರಿಗೆ ಗೊತ್ತು ?"

"ನಾನು ಎಲ್ಲಾ ಮಾತುಗಳನ್ನು ಕೇಳಿಸಿಕೊಂಡೆ ಸುಕನ್ಯಾ" ಅವಳು ಉತ್ತರಿಸಲಿಲ್ಲ. ದುಃಖಿತಳಾದಳು

"ಒಂದು ಪಕ್ಷ ಅವರು ಪುನಃ ಬಂದರೆ ಅವರಿಗೆ ಹೇಳು."

"ಏನನ್ನು ?"

"ನೀವು ಸಮೃದ್ಧರಲ್ಲ ಪೂರ್ಣರಲ್ಲ" ಎಂದು

"ಹೇಗೆ ಅಸಮೃದ್ಧರು ಹೇಗೆ ಅಪೂರ್ಣರು ಎಂದು ಕೇಳಿದರೆ ಏನು ಹೇಳಿತ್ತೀರಿ?"

"ತಾವೇ ಹೇಳಿರಿ "

"ಅವರಿಗೆ ಹೇಳು ಮೊದಲು ನನ್ನ ಪತಿಯನ್ನು ಯುವಕರನ್ನಾಗಿ ಮಾಡಿ ಅನಂತರ ಹೇಳುತ್ತೇನೆ' ಎಂದ ಋಷಿ

"ಸುಕನ್ಯೆ ! ನಾನು ಹೇಗೆ ಹೇಳುತ್ತೇನೆಯೋ ಹಾಗೆಯೇ ಮಾಡು ಇದರಲ್ಲಿ ದೋಷವಿಲ್ಲ ಅವರು ನಿನಗೆ ಏನೂ ಮಾಡಲಾರರು "

  

"ಸುಂದರೀ! ' ಆಶ್ರಮದಲ್ಲಿ ಹೂವುಗಳನ್ನು ಸಂಗ್ರಹಿಸುತ್ತಿರುವ ಸುಕನ್ಯೆಯನ್ನು ಸಂಬೋಧಿಸಿದರು ಅಶ್ವಿನಿಗಳು

"ತಿರಸ್ಕಾರದಿಂದಲೇ ಅವರನ್ನು ನೋಡಿದಳು ಹೂವುಗಳನ್ನು ಸಂಗ್ರಹಿಸುತ್ತಲೇ ಇದ್ದಳು

"ಯುವತಿ ! ನಮ್ಮ ಮಾತು ಕೇಳು ಈ ನಿನ್ನ ಯೌವನ ಜೀರ್ಣವಾಗಿ ಒಣಗಿರುವ ವೃದ್ಧನಲ್ಲಿ ಒಣಗಲಿಕ್ಕಲ್ಲ ಎಂದರು

"ನಿಮ್ಮಲ್ಲಿ ಏನು ಮಾತಾಡಲಿ ನೀವು ಸಮೃದ್ಧರಲ್ಲ. ಪೂರ್ಣರೂ ಅಲ್ಲ.

"ನಾವು" ಅವರಿಗೆ ಆಶ್ಚರ್ಯವಾಯಿತು.

"ಹೌದು"

"ಹೇಗೆ ? "

"ಇದು ಹೇಳಲು ಬರುವುದಿಲ್ಲ."

"ನಾವು ಅಶ್ವಿನೀಕುಮಾರರು ದೇವತೆಗಳು."

"ಆದರೂ ನೀವು ಅಸವ್ಯದ್ಧರು ಅಪೂರ್ಣರು ನಿಮ್ಮ ಜೊತೆಯಲ್ಲಿ ಯಾರು ವಾಸಿಸುತ್ತಾರೆ ?

"ಸುಹಾಸಿನೀ ಈ ಕಳಂಕವನ್ನು ಹೊರಿಸಲು ಕಾರಣವೇನು ?

"ಹೇಳುತ್ತೇನೆ "

"ಯಾವಾಗ"?

"ಮೊದಲು ನನ್ನ ಪತಿಯನ್ನು ಯುವಕನನ್ನಾಗಿ ಮಾಡಿ."

"ಇದು ಯಾವ ಮಹಾ ವಿಷಯ "

"ಹಾಗಾದರೆ ಮಾಡಿ ತೋರಿಸಿ"

"ಕೇಳು, ನಿನ್ನವೃದ್ಧಪತಿಯನ್ನು ಸಮೀಪದಲ್ಲಿರುವ ಕೊಳಕ್ಕೆ ಕರೆದುಕೊಂಡು ಹೋಗು ಅದರಲ್ಲಿ ಮುಳುಗಿಸು ಎಷ್ಟು ವರ್ಷದ ಯುವಕನಾಗಬೇಕೋ ಅಷ್ಟು ವರ್ಷದ ಯುವಕನಾಗುತ್ತಾನೆ ಎಂದರು ಅಶ್ವಿನೀಕುಮಾರರು.

"ಸುಕನ್ಯಾ ಸಂತೋಷಗೊಂಡಳು

  

"ತಾವು ಆ ಕೋಳದಲ್ಲಿ ಮುಳುಗಿ ಏಳಿ. ನೀರಿನಲ್ಲಿದ್ದಾಗ ಎಷ್ಟುವರ್ಷದ ಯುವಕನಾಗಬೇಕೆಂದು ಅಪೇಕ್ಷಿಸುವಿರೋ ಅದು ಆಗುವುದೆಂದರು "

ವೃದ್ಧನಾದ ಅಂಗಿರಸ ಚ್ಯವನ ಸಂತೋಷಗೊಂಡ. ಪತ್ನಿಯ ಸಹಾಯದಿಂದ ಸ್ನಾನಮಾಡಲು ಹೊರಗೆ ಹೊರಟ.

  

"ಸುಕನ್ಯೆ ! ನಿನ್ನ ಪತಿ ಯುವಕರಾದರು ಅವರಿಗೆ ಕಾಯ ಕಲ್ಪವಾಯಿತು. ಸೌಂದರ್ಯ ಬಂದಿತು ಯೌವನ ಬಂದಿತು ಯುವತಿ ! ನಮ್ಮ ಅಭಿಲಾಷೆಯನ್ನು ಪೂರ್ಣಗೊಳಿಸು"

"ಅಶ್ವಿನೀ ಕುಮಾರರೆ ! ನಿಮ್ಮ ದಯೆಯಿಂದ ನನ್ನ ಪತಿ ಯುವಕರಾದರು ನಾವು ನಿಮ್ಮನ್ನು ಪೂಜಿಸುತ್ತೇವೆ ಆದರೆ ನಿಮ್ಮ ಅಭಿಲಾಷೆಯನ್ನು ಹೇಗೆ ಪೂರೈಸಲಿ?

"ಭೃಗು ಗೋತ್ರಿಯನಾದ ನಿನ್ನ ಪತಿ ಸಮರ್ಥನಿದ್ದಾನೆ.

"ಬೇರೆ ಯುವತಿ ಅವನನ್ನು ಸ್ವೀಕರಿಸ ಬಹುದು.

"ತಾವು ಅಸಮೃದ್ಧರು, ಅಪೂರ್ಣರು."

"ಈ ಮಾತನ್ನು ನೀನು ಮೊದಲೇ ಹೇಳಿದ್ದೆ. ನಾವು ಕೊಟ್ಟವಚನವನ್ನು ಪಾಲಿಸಿದ್ದೇವೆ. ಹಳೆಯ ರಥವನ್ನು ಹಾಗೆಯೇ ಸರಿಪಡಿಸಬಹುದು ಆದರೆ ನಾವು ಹಾಗೆ ಮಾಡಲ್ಲ ಅವರಿಗೆ ಹೊಸ ರೂಪವನ್ನೇ ಕೊಟ್ಟಿದ್ದೇವೆ"

"ಹೌದು. ಅಸಮೃದ್ಧರು, ಅಪೂರ್ಣರೊಂದಿಗೆ ಯಾರು ಸಹವಾಸ ಮಾಡುತ್ತಾರೆ" ? ಸುಕನ್ಯೆ ವ್ಯಂಗ್ಯ ಮಾಡಿದಳು

"ನಿನ್ನ ಪತಿಯ ಮುಪ್ಪು ಶಕ್ತಿ ಹೀನನನ್ನಾಗಿಸಿತ್ತು ನಾವು ಶರೀರದ ಕವಾಟವನ್ನು ತೆಗೆದವು ಬಂಧುಗಳಿಂದ ತಿರಸ್ಕೃತವಾದ ಋಷಿಯ ಆಯುಷ್ಯವನ್ನು ಹೆಚ್ಚಿಸಿಸಿದೆವು ಅವರನ್ನು ಯೋಗ್ಯ ಪತಿಯನ್ನಾಗಿ ಮಾಡಿದೆವು. ಈಗ ನೀನು ನಮ್ಮನ್ನು ಹಾಸ್ಯ ಮಾಡುತ್ತೀಯಾ?' ಎಂದು ಸೋತವರಂತೆ ನಾಚಿಕೆಯಿಂದ ಹೇಳಿದರು

"ಇಲ್ಲ ಇಲ್ಲ ಅಶ್ವಿನಿಗಳೆ "

"ನಿನ್ನ ಪತಿಗೆ ಶಕ್ತಿಯನ್ನು ಕೊಟ್ಟಿದೇವೆ ಪತ್ನಿಯಿಂದ ಸ್ವೀಕರಿಸಲು ಯೋಗ್ಯನನ್ನಾಗಿ ಮಾಡಿದ್ದೇವೆ

"ತಾವು ಅಪೂರ್ಣರು ನಿಮ್ಮೊಡನೆ ಯಾರು ಸಂಬಂಧ ಮಾಡುತ್ತಾರೆ?" ಎಂದು ಸುಕನ್ಯೆ ಹೇಳಿದಳು

"ಕಾರಣವನ್ನು ತಿಳಿಸವುದಾಗಿ ಹೇಳಿದ್ದೆ ! "ಏಕೆ ಹೇಳುವುದಿಲ್ಲ "

"ಹೇಳುತ್ತೇನೆ ನಗುತ್ತಾ ಹೇಳಿದಳು '

"ಹೇಳು ! ಕಾರಣವನ್ನು ತಿಳಿಯಲು ಉತ್ಸುಕರಾಗಿ ಕೇಳಿದರು ಅಶ್ವಿನಿಗಳು

'ಕುರುಕ್ಷೇತ್ರದಲ್ಲಿ ದೇವತೆಗಳು ಯಜ್ಞಮಾಡುತ್ತಿದ್ದಾರೆ ಅವರು ನಿಮ್ಮನ್ನು ಯಜ್ಞದಿಂದ ಬಹಿಷ್ಕರಿಸಿದ್ದಾರೆ ಆದರಿಂದ ನೀವು ಪೂರ್ಣ ದೇವತೆಗಳಲ್ಲ ಸ್ವತಃ ಅಸಮೃದ್ಧರು ಅಪೂರ್ಣರಾಗಿದ್ದೀರಿ

"ಓಹ್" ಅಶ್ವಿನಿಗಳು ಚಕಿತರಾದರು

"ಸುಕನ್ಯಾ ಪರಿಹಾಸಮಾಡಿ ನಕ್ಕಳು ಅಶ್ವಿನಿಗಳು ನಾಚಿಕೆಯಿಂದ ಅಲ್ಲಿಂದ ಹೊರಟು ಹೋದರು ಕುರುಕ್ಷೇತ್ರದಲ್ಲಿ ದೇವತೆಗಳು ಯಜ್ಞ ಮಾಡುತ್ತಿದ್ದರು ಅಲ್ಲಿಗೆ ಅಶ್ವಿನಿ ಕುಮಾರರು ಹೋದರು ಅಲ್ಲಿ ಅವರಿಗೆ ಯಾವ ಸ್ಥಾನವೂ ಮೀಸಲಿರಲಿಲ್ಲ ಅವನ್ನು ಗಮನಿಸಿದರು. ಅಶ್ವಿನಿಗಳನ್ನು ಬಹಿಷ್ಕರಿಸಲಾಗಿತ್ತು "

"ಯಜ್ಞದಲ್ಲಿ ಏಕೆ ನಮಗೆ ಸ್ಥಾನವಿಲ್ಲ" ಎಂದರು ಅಶ್ವಿನಿಗಳು

"ತಾವು ಮಾನವರೊಡನೆ ಸಂಚರಿಸುತ್ತೀರಿ. ಅವರೊಡನೆ ಇರುತ್ತೀರಿ ಅವರಲ್ಲಿ ಪ್ರಾಯಶ್ಚಿತ್ತ ಮಾಡುತ್ತೀರಿ

"ಆದರೆ ನಿಮ್ಮ ಯಜ್ಞ ಪೂರ್ಣವಾಗುವುದಿಲ್ಲ "

"ಏಕೆ ?"

"ಜೀರ್ಣವಾದ ಬಲಿಯಿಂದ ಯಜ್ಞಮಾಡುತ್ತಿದ್ದೀರಿ. ಅದು ಹೇಗೆ ಪೂರ್ಣ ವಾಗುತ್ತದೆ?"

"ಒಂದು ಪಕ್ಷ "

"ನಾವು ಜೀರ್ಣವಾದುದನ್ನು ಸರಿಪಡಿಸುತ್ತೇವೆ "

"ಯಾವರೀತಿ ?"

"ನಮ್ಮನ್ನು ಆಮಂತ್ರಿಸಿರಿ "

ದೇವತೆಗಳು ತಮ್ಮಲ್ಲಿ ವಿಚಾರ ವಿನಿಮಯ ಮಾಡಿಕೊಂಡರು

"ಸತ್ಯವಾಗಿ "

ಅಶ್ವಿನಿಗಳು ಅಧ್ವರ್ಯುಗಳಾದರು ಬಲಿಯ ವಿಜೀರ್ಣತೆ ದೂರವಾಯಿತು. ವೇದೋಚ್ಚಾರ ಪ್ರಾರಂಭವಾಯಿತು ಯಜ್ಞವು ಪೂರ್ಣವಾಯಿತು ಅಶ್ವಿನಿಗಳಿಗೂ ಪೂರ್ಣತ್ವ ಲಭಿಸಿತು ಯಜ್ಞದಲ್ಲಿ ಭಾಗಿಗಳಾದರು

ಇತ್ತ ಆಶ್ರಮದಲ್ಲಿ ತರುಣ ಮಂತ್ರದ್ರಷ್ಟ ಚ್ಯವನ ಋಷಿಯು ಯುವ ಪತ್ನಿ ಸುಕನ್ಯೆಯೊಡನೆ ಪ್ರಸನ್ನನಾಗಿದ್ದ

ಆಧಾರ ಗ್ರಂಥ

ಋಗ್ವೇದ : ೧-೧೧೨, ೬-೧೦, ೧-೧೧೬-೧೦, ೧-೧೧೭-೧೩, ೧-೧೧೮-೬, ೫-೭೪-೫, ೭-೬೮-೬, ೭-೭೧-೫, ೮-೨೧-೪, ೧೦-೧೭, ೧೦-೩೯-೪, ೧೦-೬೧-೧-೩, ೧೦-೧೨೭-೧೩

ಶತಪಥ ಬ್ರಾಹ್ಮಣ : ೪-೧-೫-೧೩

ತಾಂಡ್ಯ ಬ್ರಾಹ್ಮಣ ೧೬-೬ ೧೧

ಪಂಚವಿಂಶ ಬ್ರಾಹ್ಮಣ : ೧೧-೮-೧೧, ೧೩-೫-೧೨, ೧೪-೬-೧೦, ೧೦-೩-೬,

ಗೋಪಥ ಬ್ರಾಹ್ಮಣ : ೧-೧-೧೪

ಐತರೇಯ ಬ್ರಾಹ್ಮಣ : ೮-೨೧-೪.

**ಟಿಪ್ಪಣಿ :** ಅಂತರ್ಜಾತೀಯ ವಿವಾಹ ಪದ್ಧತಿಯನ್ನು ಇಲ್ಲಿ ನಾವು ಕಾಣ ಬಹುದು ವಿವಾಹ ಒಂದು ವರ್ಗ ಅಥವಾ ಒಂದು ಜಾತಿಗೆ ಸೀಮಿತವಾಗಿರಲಿಲ್ಲ ಅದು ಆರ್ಯರಲ್ಲಿ ಮಾತ್ರವಿತ್ತು ರಾಜನು ತನ್ನ ಕನ್ಯೆಯನ್ನು ಸಂತೋಷದಿಂದ ಪ್ರತಿಗಳ ಹಿತ ಕ್ಕಾಗಿ ಋಷಿಗೆ ದಾನಮಾಡುತ್ತಾನೆ ಕಾಯಕಲ್ಪದ ವಿಷಯ ಈ ಕಥೆಯಲ್ಲಿ ಬಂದಿದೆ ಅಶ್ವಿನಿ ಕುಮಾರರು ಕುಶಲ ಶಲ್ಯಚಿಕಿತ್ಸಕರಾಗಿದ್ದರು ಅವರು ಋಷಿ ಚ್ಯವನರ ಮುಪ್ಪನ್ನು ಔಷ ಧೋಪಚಾರಗಳಿಂದ ದೂರಮಾಡಿದರು ಯಾವರೀತಿ ಮಾಡಿದರೆಂಬುದಕ್ಕೆ ಋಗ್ವೇದ ಮೌನವಾಗಿದೆ ಕಾಲಾಂತರದಲ್ಲಿ ಚ್ಯವನಪ್ರಾಶ ಇತ್ಯಾದಿ ಔಷಧಿಗಳು ಪ್ರಚಾರಕ್ಕೆ ಬಂದಿವೆ

ಇದರಲ್ಲಿ ವ್ಯಂಗ್ಯ ಹಾಗೂ ಪರಿಹಾಸವೂ ಇದೆ ವೈದಿಕ ಕಾಲದ ಒಂದು ಚಿತ್ರಣ

ನಮ್ಮ ಮುಂದೆ ಬರುತ್ತದೆ ವೈದಿಕ ಕಾಲದವರೂ ಸಹ ನಮ್ಮಂತೆ ಮಾನವರಾಗಿದ್ದರು. ಅರ್ಥ ಮತ್ತು ಕಾಮಗಳು ಜೀವನದ ಅಂಗಗಳಾಗಿದ್ದವು ಅವರು ಅಪ್ರಾಕೃತಿಕರಲ್ಲ, ಪ್ರಾಕೃತಿಕರೇ ಆಗಿದ್ದರು.

**ಕುರು ಕ್ಷೇತ್ರ :** ಒಂದು ಪವಿತ್ರವಾದ ದೇಶ ಅದರ ಸೀಮೆಯಲ್ಲಿ ದೃಶದ್ವತೀ, ಸರಸ್ವತೀ, ಮತ್ತು ಆಪ್ಯಾನದಿಗಳು ಹರಿಯುತ್ತಿದ್ದವು ಶರ್ಯಣಾವತ ಎಂಬ ಸರೋವರ ಇಲ್ಲಿ ಇತ್ತು "ಪಿಶಲ್‌ನ" ಪ್ರಕಾರ ಪ್ರಸ್ತ್ಯಾ ಎಂಬ ನದಿಯು ಇಲ್ಲಿ ಹರಿಯುತ್ತಿತ್ತು ಆರಣ್ಯಕದ ಪ್ರಕಾರ ಕುರುಕ್ಷೇತ್ರದ ಎಲ್ಲೆ ಉತ್ತರದಲ್ಲಿ ತೂರ್ಘ್ನ, ದಕ್ಷಿಣದಲ್ಲಿ ಖಾಂಡವ, ಹಾಗೆ ಪಶ್ಚಿಮದಲ್ಲಿ ಪರಿಣಹ ಇತ್ತು ಆಧುನಿಕವಾಗಿ ಹಿಂದ್ ಕ್ಷೇತ್ರದ ಸೀಮೆಯೂ ಇದೇ ಆಗಿದೆ.

ಶತಪಥ ಬ್ರಾಹ್ಮಣ ಹಾಗೂ ಜಾಬಾಲೋಪನಿಷತ್ತಿನಂತೆ ದೇವತೆಗಳ ಯಜ್ಞಭೂಮಿಯಾಗಿತ್ತು ಮಹಾಭಾರತದಲ್ಲಿ ಇದನ್ನು ಸಮಂತ ಪಂಚಕ ಹಾಗೂ ಉತ್ತರವೇದಿ ಎಂಬ ಹೆಸರಿನಿಂದ ಕರೆಯುತ್ತಿದ್ದರು ಬ್ರಹ್ಮನನ್ನು ಯಜ್ಞವೇದೀ ಎಂದು ವರ್ಣಿಸಿದ್ದಾರೆ ಗೀತೆಯಲ್ಲಿ ಇದನ್ನು ಧರ್ಮಕ್ಷೇತ್ರವೆಂದು ಕರೆದಿದ್ದಾರೆ

**ಗೋಪಾಲ .** ಋಗ್ವೇದದ ಕಾಲದಲ್ಲಿ ಗೋಪಾಲ ಶಬ್ದವು ಬಹಳ ಪ್ರಚಲಿತವಾಗಿತ್ತು ರಕ್ಷಕರೆಂಬ ಅರ್ಥದಲ್ಲಿ ಇದನ್ನು ಕಾಣಬಹುದು

**ಚ್ಯವನ :** ಇಂದಿನ ದಿನಗಳಲ್ಲಿ ಪ್ರಚಲಿತವಾಗಿರುವ ಚ್ಯವನ ಋಗ್ವೇದದಲ್ಲಿ ಚ್ಯವಾನ ಆಗಿದ್ದಾನೆ ಅವನೊಬ್ಬ ಋಷಿ ಭೃಗು ಋಷಿಯ ಮಗ ಆದ್ದರಿಂದ ಭಾರ್ಗವನೆಂದೂ ಕರೆಯುತ್ತಾರೆ ಇವನ ತಾಯಿ ಪುಲೋಮ ಬ್ರಾಹ್ಮಣ ಗ್ರಂಥಗಳಲ್ಲಿ ಇವನನ್ನು ದಾಧೀಚನೆಂದು ಕಾಣಬಹುದು

**ಶರ್ಯಾತ :** ಮನುವಂಶೀಯನಾದ ಶರ್ಯಾತನು ಚ್ಯವನನ ಮಾವ ಸುಕನ್ಯೆಯ ತಂದೆ ಅಶ್ವಿನಿಗಳ ಕೃಪಾ ಪಾತ್ರನು. ಇವನು ಪ್ರಸಿದ್ಧ ಯಜ್ಞಕರ್ತಾರಾಜನಾಗಿದ್ದ ವೈದಿಕಸೂತ್ರದ ದ್ರಷ್ಟಾರನೂ ಆಗಿದ್ದ. ಇಂದ್ರನು ಇವನ ವಾಸಕ್ಕೆ ಬಂದು ಸೋಮಪಾನ ಮಾಡುತ್ತಿದ್ದ ಚ್ಯವನನನ್ನು ಋತ್ವಿಜನನ್ನಾಗಿ ಮಾಡಿ ಅಶ್ವಮೇಧಯಾಗ ಮಾಡಿದ್ದ. ದೇವಯಜ್ಞಗಳಲ್ಲಿ ಗೃಹ ಪತಿಯೆಂದು ಇವನಿಗೆ ಮಹತ್ವದ ಸ್ಥಾನಕೊಟ್ಟಿದ್ದರು

**ಸುಕನ್ಯಾ :** ಶರ್ಯಾತನ ಮಗಳಾದ್ದರಿಂದ ಶರ್ಯಾತ ಸುಕನ್ಯಾ ಎಂದು ಕರೆಯುತ್ತಿದ್ದರು ಇವಳು ಚ್ಯವನನ ಧರ್ಮಪತ್ನಿ

ಶ್ರೀ ಶ್ರೀ ಶ್ರೀ

# ಋಭುಗಣ

ಸುಧನ್ವ ಅಂಗಿರಸನ ಮಗ ಅವನಿಗೆ ಋಭುಗಣ, ವಿಂಬನ ಮತ್ತು ವಾಜ ಎಂಬ ಮೂರುಜನ ಮಕ್ಕಳು. ಈ ಮೂವರು ಕುಶಲ ಶಿಲ್ಪಿಗಳು ತ್ವಷ್ಟನ ಶಿಷ್ಯರು. ತ್ವಷ್ಟನು ತನ್ನಲ್ಲಿದ್ದ ಎಲ್ಲಾ ವಿದ್ಯೆಗಳನ್ನು ಅವರಿಗೆ ಕಲಿಸಿದ ಅವರ ವಿದ್ಯೆ ಕೇವಲ ಕಲೆಗೆ ಸೀಮಿತವಾಗಿರಲಿಲ್ಲ ಅವರು ಅಮೃತ ಸಮಾನವಾದ ಹಾಲನ್ನು ಕೊಡುವ ಹಸುಗಳನ್ನು ನಿರ್ಮಿಸಿದರು ಸತ್ಯಾಶ್ರಯರು ಸರಳರೂ ಸ್ನೇಹಿಗಳೂ ಆದ ಋಭುಗಳು ಮುಪ್ಪಿನಿಂದ ಅಶಕ್ತರಾದ ತಂದೆ ತಾಯಿಗಳನ್ನು ತಮ್ಮ ಕಲೆಯಿಂದ ಯುವಕರನ್ನಾಗಿ ಮಾಡಿದರು

ತ್ವಷ್ಟನು ಒಂದು ಚಮಸ (ಪಾನಪಾತ್ರೆ) ವನ್ನು ಮಾಡಿದ ಋಭುಗಳು ತನ್ನ ಗುರು ತ್ವಷ್ಟನಿಗಿಂತ ಕಲೆಯಲ್ಲಿ ನಿಪುಣರಾದರು ಅವರು ಒಂದು ಚಮಸ ಪಾತ್ರೆಗೆ ಬದಲಾಗಿ ನಾಲ್ಕನ್ನು ಮಾಡಿದರು ಅವರು ತಮ್ಮ ಕಲೆ, ಕರಕುಶಲತೆ ಹಾಗೂ ಕಾರ್ಯನಿಷ್ಠೆಯ ಬಗೆ ಸ್ತುತಿಸುವುದನ್ನು ಕೇಳಿದರು ಅವರು ದೇವತೆಗಳ ಒಡನಾಡಿಗರಾದರು ಅವರು ಮಾನವರಾದರೂ ಅವರಿಗೆ ಯಜ್ಞಭಾಗಗಳು ಸಿಕ್ಕುತ್ತಿದ್ದವು

ಋಭುಗಳ ಕಾರ್ಯ ಕೌಶಲ್ಯವನ್ನು ನೋಡಿ ಸೂರ್ಯನಿಗೆ ಆನಂದವಾಯಿತು ಮರಣಧರ್ಮಿಗಳಾದವರೂ ಋಭುಗಳ ನಿರಂತರ ಪರಿಶ್ರಮ ಹಾಗೂ ಶುಭಕರ್ಮಗಳಿಂದ ಅಮರತ್ವವನ್ನು ಪಡೆದರು

ಒಂದು ಸಾರಿ ದೇವತೆಗಳ ದೂತನಾಗಿ ಅಗ್ನಿಬಂದ ಅವನು ಋಭುಗಳ ಮರಗೆಲಸವನ್ನು ನೋಡಿ ಹೊಗಳಿದ ಋಭುಗಳು ಅವನಿಗೆ ಪ್ರತಿವಂದಿಸಿದರು

"ಅಪ್ಪಣೆಯಾಗಲಿ" ಎಂದರು ಋಭುಗಳು

ತ್ವಷ್ಟನು ಒಂದು ಚಮಸವನ್ನು ಮಾಡಿದ್ದಾನೆ

"ತಿಳಿದಿದೆ ಮಹಾತ್ಮರೆ"

ಆ ಒಂದು ಚಮಸಪಾತ್ರೆಯನ್ನು ನಾಲ್ಕು ಮಾಡಿ ಕೊಡಿ

"ಇದರಿಂದ ಏನು ಪ್ರಯೋಜನ ?" ಋಭುಗಳು ಆಶ್ಚರ್ಯದಿಂದ ಕೇಳಿದರು

"ದೇವತೆಗಳಿಗೆ ಸಮಾನರಾದ ನೀವು ಯಜ್ಞ ಭಾಗಕ್ಕೆ ಅರ್ಹರಾಗುತ್ತೀರಿ "

ಋಭುಗಣಗಳು ವಿಚಾರಮಗ್ನರಾದರು

'ಮಹಾತ್ಮರೆ' ! ಒಂದು ಚಮಸದಿಂದ ಎರಡನ್ನು ಮಾಡುತ್ತೇನೆ ಎಂದ ಋಭು.

"ಮಹಾತ್ಮರೆ ! ಮೂರು ಮಾಡುತ್ತೇನೆ . ಎಂದ ಎರಡನೇ ಋಭು

"ಮಹಾತ್ಮರೆ ! ನಾನು ನಾಲ್ಕು ಮಾಡುತ್ತೇನೆ' ಎಂದ ಮೂರನೇ ಋಭು ಅಗ್ನಿಗೆ

ಸಂತೋಷವಾಯಿತು

ನಿಮ್ಮಗುರು ತ್ವಷ್ಟ ನಾಲ್ಕು ಚಮಸ ಮಾಡಿಕೊಡಲು ಒಪ್ಪಿದ್ದಾನೆ ಎಂದ ಅಗ್ನಿ.

ಋಭುಗಣಗಳು ಸಂತಸಗೊಂಡರು ಅವರು ನಾಲ್ಕು ಚಮಸಗಳನ್ನು ಮಾಡಿ ಕೊಟ್ಟರು

"ಚಿತ್ರ ಸ್ವರೂಪನಾದ ಅಗ್ನಿಯೆ ಇನ್ನೂ ಏನಾದರೂ ಸೇವೆಗೆ ಸಿದ್ಧ" ಎಂದು ನಮಸ್ಕರಿಸುತ್ತಾ ಹೇಳಿದರು

"ಋಭುಗಳೇ ! ನೀವು ಕರಕುಶಲರು ಅಮರತ್ವ ಪಡೆಯುವ ಮಾರ್ಗದಲ್ಲಿ ಮುನ್ನಡೆಯಲು ಪ್ರಯತ್ನಿಸಿ" ! ಅಗ್ನಿಯು ನಗುತ್ತಾ ಹೊರಟುಹೋದ

ಋಭುಗಳಿಗೆ ಯಜ್ಞಭಾಗವು ಸಿಗುವಂತಾಯಿತು ದೇವತ್ವ ಪ್ರಾಪ್ತಿಯಾಯಿತು ದೇವತೆಗಳೊಡನೆ ಸೋಮಪಾನ ಮಾಡುವ ಅಧಿಕಾರವನ್ನು ಹೊಂದಿದರು ಅವರ ಸ್ತೋತ್ರಗಳು ರಚಿಸಲ್ಪಟ್ಟವು ಅವರನ್ನು ಸ್ತುತಿಸಿದರು ಅವರಿಗಾಗಿ ಯಜ್ಞಗಳು ಪ್ರಾರಂಭಿಸಲ್ಪಟ್ಟವು ಸೋಮನು ಅವರ ಸೇವೆಗಾಗಿ ಕಾದು ನಿಂತ

ಋಭುಗಳು ಅಶ್ವಿನೀಕುಮಾರರಿಗಾಗಿ ಮೂರು ಆಸನಗಳ ರಥವನ್ನು ನಿರ್ಮಿಸಿದರು. ಇಂದ್ರನಿಗಾಗಿ ಎರಡು ಕುದುರೆಗಳ ಶೀಘ್ರಗಾಮೀರಥರನ್ನು ಮಾಡಿದರು ಹಸು ಮತ್ತು ಕುದುರೆಗಳನ್ನು ನಿರ್ಮಿಸಿದರು ದೇವತೆಗಳಿಗಾಗಿ ಅಭೇಧ್ಯ ಕವಚವನ್ನು ಮಾಡಿದರು ಆಕಾಶ ಮತ್ತು ಭೂಮಿಯನ್ನು ಬೇರ್ಪಡಿಸಿದರು ಸುಂದರ ಸಂತಾನವನ್ನು ಮಾಡುವ ಸಾಮರ್ಥ್ಯ ಪಡೆದರು ಅವರು ಪ್ರಥಮ ಸೋಮಪಾನಿಗಳಾದರು

ಋಭುಗಣಗಳು ಸುಂದರವಾದ ಒಂದು ಚಕ್ರವನ್ನು ಮಾಡಿದರು ಉತ್ತಮ ಚಕ್ರಗಳಿರುವ ರಥವನ್ನು ನಿರ್ಮಿಸಿದರು ಪ್ರಪಂಚಕ್ಕೆ ಚೈತನ್ಯವನ್ನುಂಟುಮಾಡುವ ಅನೇಕ ವಿಧವಾದ ಹಸುಗಳನ್ನು ಸೃಷ್ಟಿಸಿದರು ಇಂದ್ರನು ವರವಿತ್ತ ಅವರು ಕುದುರೆ ರಥ ಇತ್ಯಾದಿಗಳನ್ನು ನಿರ್ಮಿಸಲು ಒಪ್ಪಿದರು

ಕನಿಷ್ಟ ಋಭುವು ದೇವತೆಗಳೊಡನೆಯೂ ಮಧ್ಯಮ ಋಭುವು ವರುಣನೊಡನೆಯೂ, ಜ್ಯೇಷ್ಠ ಋಭುವು ಇಂದ್ರನೊಡನೆಯೂ ಸಂಬಂಧ ಇಟ್ಟುಕೊಂಡರು ಇಂದ್ರನಿಗೆ ಮಿತ್ರರಾದರು. ಇಂದ್ರನೊಡನೆ ಸೋಮಪಾನಿಗಳಾದರು ಅಲ್ಲದೆ ವರುಣ ಹಾಗೂ ಮರುದ್ಗಣಗಳೊಡನೆ ಸೋಮವನ್ನು ಸ್ವೀಕರಿಸುತ್ತಿದ್ದರು

ಮರಣ ಧರ್ಮಿಗಳಾಗಿಯೂ ಸಹ ಪೂಜಾರ್ಹ ದೇವತೆಗಳೊಡನೆ ಸೇರಿದರು ಋಭುಗಳು ಅಶ್ವಿನೀಕುಮಾರರಿಗಾಗಿ ಮೂರು ಚಕ್ರದ ಹೊಳೆಯುವ ರಥವನ್ನು ನಿರ್ಮಿಸಿದರು ಅದು ಕುದುರೆಗಳಿಲ್ಲದೆ ಆಕಾಶದಲ್ಲಿ ಚಲಿಸುತ್ತಿತ್ತು

ಅವರ ದೇವತ್ವಕ್ಕೆ ಆ ರಥವೇ ಸಾಕ್ಷಿಯಾಯಿತು ಅವರು ರಥವನ್ನು ಗೋಚರ್ಮದಿಂದ ಮುಚ್ಚಿದರು ಅದರಿಂದ ಅವಿನಾಶೀ ಪದವಿ ಸಿಕ್ಕಿತು.

ಅವರು ದೇವತೆಗಳಂತೆ ಯಜ್ಞಗಳಲ್ಲಿ ವಿರಾಜಿಸತೊಡಗಿದರು ವಿಶ್ವದೇವತೆಗಳಿಗಾಗಿ ವಿವಿಧ ವಾಹನ ಆಯುಧಗಳನ್ನು ನಿರ್ಮಿಸಿದರು ಮೂರನೆ ಸವನದಲ್ಲಿ

ದೇವತೆಗಳ ಜೊತೆಯಲ್ಲಿ ಅವರ ಯಜ್ಞಭಾಗಗಳು ನಿರ್ಧಾರವಾದವು ಅವರು ತಮ್ಮ ಕರ್ತವ್ಯ ನಿಷ್ಠೆಯಿಂದ ದೇವತೆಗಳಾದರು. ಅವರು ದೇವತ್ವವನ್ನು ಪಡೆಯಲು ಮಾನವರಿಗೆ ಮಾರ್ಗದರ್ಶಿಗಳಾದರು.

ಮಾನವನು ದೆವತೆಯಾಗಬಲ್ಲ ಎಂಬ ಆಶೆಯನ್ನು ಮಾನವರಲ್ಲಿ ಹುಟ್ಟುವಂತೆ ಮಾಡಿದರು ಮಾನವರು ದೇವತೆಗಳನ್ನು ಪೂಜಿಸುತ್ತಾರೆ ಆದರೆ ತಮ್ಮ ಕುಶಲ ಕರ್ಮಗಳಿಂದ ಪೂಜಿತರಾಗುತ್ತಾರೆ

ಆಧಾರ **ಗ್ರಂಥ :**

**ಋಗ್ವೇಧ :** ೧-೨೦, ೧-೧೬೧, ೧-೪-೩೩-೧. ೪-೩೪, ೧-೪-೪-೩೬, ೨,೬
**ಐತರೇಯ ಬ್ರಾಹ್ಮಣ :** ೩ ೩೦
**ಬೃಹದ್ದೇವತಾ :** ೩-೮೩-೮೮

**ಟಿಪ್ಪಣಿ :**

ಈ ಕಥಾನಕದಲ್ಲಿ ಮನುಷ್ಯನು ತನ್ನ ಕರ್ಮಗಳಿಂದ ದೇವತ್ವ ಹಾಗೂ ಯಜ್ಞಗಳಲ್ಲಿ ದೇವತೆಗಳಿಗೆ ಸಮಾನವಾದ ಯಜ್ಞ ಭಾಗವನ್ನು ಪಡೆಯಬಲ್ಲ ಎಂಬುದು ಸಿದ್ಧಾಂತವಾಗಿದೆ ಜಾತಿ ಯಾವಾಗಲೂ ದೊಡ್ಡದಲ್ಲ ಕರ್ಮವೇ ದೊಡ್ಡದೆಂದು ತಿಳಿಯಲಾಗಿದೆ ಕರ್ಮದಿಂದ ಎಲ್ಲವನ್ನು ಪಡೆಯಬಹುದು ಋಭುಗಳಿಗೆ ಇಂದ್ರ ಹಾಗೂ ಸೂರ್ಯನೊಡನೆ ಸೋಮ ಪಾನ ಮಾಡುವ ಅಧಿಕಾರ ತಮ್ಮ ಶಿಲ್ಪಚಾತುರ್ಯದಿಂದ ಪ್ರಾಪ್ತವಾಗಿದ ಋಭುಗಳನ್ನು ಆಹ್ವಾನಿಸತೊಡಗಿದರು ಯಾರೇ ಆಗಲಿ ಶಿಲ್ಪಿ ಎನಿಸಿಕೊಳ್ಳುವುದರಿಂದ ಉಚ್ಚನೀಚನಾಗವುದಿಲ್ಲ ಕರ್ಮವೇ ಮನುಷ್ಯನನ್ನು ಮೇಲು ಕೀಳು ಮಾಡುತ್ತದೆ ಈ ಕಥೆಯಲ್ಲಿ ಜನ್ಮದಿಂದ ವರ್ಣಕ್ಕೂ ಕರ್ಮದಿಂದ ವರ್ಣಸಿದ್ಧಾಂತವನ್ನು ಮಾಡಲಾಗಿದ

**ಅಂಗಿರಸ :** ಐತಿಹಾಸಿಕಪುರುಷನೆಂದು ಒಪ್ಪುವಲ್ಲಿ ವಿದ್ವಾಂಸರ ಭಿನ್ನಾಭಿಪ್ರಾಯವಿದೆ ಅಂಗಿರಸ ಶಬ್ದವನ್ನು ಬೃಹಸ್ಪತಿ ಇನ್ನೂ ಮುಂತಾದವರಿಗೂ ಹೇಳುತ್ತಾರೆ ಅದನ್ನು ಒಂದು ಪರಿವಾರಕ್ಕೂ ಹೇಳಲಾಗಿದೆ ಅವನನ್ನು ಅಗ್ನಿಯ ಪುತ್ರನೆಂದೂ ಹೇಳಿದೆ

**ಚಮಸ :** ಪಾನಪಾತ್ರೆಗೆ ಹೇಳುತ್ತಾರೆ ಯಾಗದಲ್ಲಿ ಸೋಮವನ್ನು ತ ಂಬುವ ಪಾತ್ರೆಯೇ ಚಮಸ. ಅದನ್ನು ಮರದಿಂದ ಮಾಡುತ್ತಾರೆ. ಆದ್ದರಿಂದ ಇದನ್ನು 'ದ್ರು' ಎಂದೂ ಕರೆಯುತ್ತಾರೆ ಔದುಂಬರ ಮರವನ್ನು ಇದಕ್ಕೆ ವಿಶೇಷವಾಗಿ ಉಪಯೋಗಿಸುತ್ತಾರೆ.

**ತ್ವಷ್ಟ :** ಇವನು ದೇವ ಶಿಲ್ಪಿ ಇವನನ್ನು ಬಡಗಿ ಎಂಬ ಅರ್ಥದಲ್ಲಿ ಪ್ರಯೋಗಿಸುತ್ತಾರೆ. ಪ್ರಚಲಿತ ಅರ್ಥದಲ್ಲಿ ವಿಶ್ವಕರ್ಮನೆಂದು ಹೇಳಬಹುದು.

**ಋಭು :** ಇವನು ಸುಧನ್ವನ ವಂಶಜ. ಮಾನವನಾದರೂ ತನ್ನ ಕಲ್ಲು

ಕುಶಲತೆಯಿಂದ ದೇವತ್ವ ಹಾಗೂ ಸೋಮಪಾನ ಮಾಡುವ ಅಧಿಕಾರ ಪಡೆದ. ಋಭುಗಣರು ಇವರಲ್ಲಿ ಶ್ರೇಷ್ಠರು. ವಾಜ ಮತ್ತು ವಿಂಬನ ಇವರು ವಿಶೇಷ ಋಭುಗಳು.

ಋಭು ಶಬ್ದವು 'ರಮ್' ಧಾತುವಿನ ಮೂಲಕಾ ಹಸ್ತ ಕುಶಲಿಗಳು ಅಥವಾ ನಿಪುಣರು ಎಂದು ಅರ್ಥ.

**ವಿಶ್ವದೇವ :** ಎಲ್ಲಾ ದೇವತೆಗಳನ್ನು ಒಂದೇ ಸಾರಿ ಸಂಬೋಧಿಸ ಬೇಕಾದರೆ "ವಿಶ್ವದೇವ ಎಂದು ಕರೆಯುತ್ತಾರೆ " ದೇವ ಸಮೂಹವೆಂದರ್ಥ

**ಸವನ :** ಸೋಮರಸವನ್ನು ತೆಗೆಯುವ ವಿಧಾನ ಕಾಲಾಂತರದಲ್ಲಿ ಸೋಮನ ಆಹುತಿಯಲ್ಲಿ ಪ್ರಯೋಗಿಸಲು ಆ ಶಬ್ದವನ್ನು ಉಪಯೋಗಿಸಿಕೊಂಡರು. ಪ್ರಾತಃ ಸವನ ಮಧ್ಯದಿವಸ ಸವನ ಸಾಯಂ ಸವನ ಎಂದು ಮೂರು ವಿಭಾಗ ಇದು ಅನಂತರ ಹವಿಸ್ಸಿನ ವಿಶೇಷ ವಾಚಕವಾಯಿತು

**ಸುಧನ್ವ ·** ಅಂಗಿರಸನ ವಂಶಜ

**ಸ್ವಧಾ** ತಂದೆಗಾಗಿ ಕೊಡುವ ಹವಿಸ್ಸನ್ನು ಕೊಡುವ ಸಮಯದಲ್ಲಿ ಉಚ್ಚರಿಸುವ ಶಬ್ದದ ಅರ್ಥದಲ್ಲಿ ಪ್ರಯೋಗಿಸುತ್ತಾರೆ ಧಾರಕಶಕ್ತಿ ಇದರ ಅರ್ಥ.



# ತ್ರಿಪದ ವ್ಯಾಪನ

ವಿಷ್ಣುವು ಭೂಮಿಗೆ ಬಂದ ಮೂರು ಹೆಜ್ಜೆ ಇಟ್ಟು ಭೂಮಿಯಲ್ಲಿ ಸಂಚರಿಸಿದ ಅವನ ಪಾದರೇಣುವಿನಲ್ಲಿ ಸಮಸ್ತ ಜಗತ್ತು ಸೇರಿ ಹೋಗಿತ್ತು ಸರ್ವರಕ್ಷನಾದ ವಿಷ್ಣುವು ಧರ್ಮರಕ್ಷಣೆಗಾಗಿ ಮೂರು ಪಾದಗಳನ್ನಿಟ್ಟ.

ಉಪಾಸಕರು ಅವನ ಪರಾಕ್ರಮದಿಂದಾಗಿ ವ್ರತಗಳನ್ನು ಪೂರ್ತಿಮಾಡಿದರು ವಿಷ್ಣುವು ಇಂದ್ರನಿಗೆ ಯೋಗ್ಯನಾದ ಸ್ನೇಹಿತ ಮಿತ್ರ, ವರುಣ, ಅರ್ಯಮಾ, ಇಂದ್ರ ಬೃಹಸ್ಪತಿ ಹಾಗೂ ವಿಷ್ಣುವು ಜಗತ್ತಿಗೆ ಸುಖದಾಯಕರಾಗಿದ್ದಾರೆ ವಿಷ್ಣುವಿನ ಕಾರ್ಯವೆಂದರೆ ಅವನ ಲೋಕರಚನೆಯೇ ಆಗಿದೆ. ಆಕಾಶವನ್ನು ಚಲಿಸದಂತೆ ನಿಲ್ಲಿಸಿದ

ಅವನು ಮೂರು ಪಾದಗಳಿಂದ ಲೋಕವನ್ನು ಆವರಿಸಿದ. ಒಮ್ಮೆಗೇ ಮೂರು ಲೋಕಗಳನ್ನು ಮೂರು ಪಾದಗಳಿಂದ ಆವರಿಸಿದ

ಜಗತ್ತು ವಿಷ್ಣುವನ್ನು ಸ್ತುತಿಸಿತು ಧರ್ಮಭೀರುವಾದ ಮನುಷ್ಯನು ವಿಷ್ಣು

ವಿನ ಪ್ರಿಯವಾದ ಮಾರ್ಗವನ್ನು ಅನುಸರಿಸುವುದೇ ತನ್ನ ಅಹೋಭಾಗ್ಯವೆಂದು ತಿಳಿದ ಆ ವಿಶಾಲವಾದ ಮಾರ್ಗವನ್ನು ಆಶ್ರಯಿಸುವುದರಿಂದ ಆನಂದ ಉಂಟಾಗುತ್ತದೆ. ಆಶ್ರಯವನ್ನು ಜಗತ್ತು ಅಪೇಕ್ಷಿಸುತ್ತದೆ ರಾಕ್ಷಸರಿಂದ ಜಗತ್ತು ಹಿಂಸೆಗೊಳಗಾದಾಗ ಮೂರು ಪಾದಗಳಿಂದ ಜಗತ್ತನ್ನು ಆವರಿಸಿ ಉದ್ಧಾರ ಮಾಡಿದ ವಿಷ್ಣು.

ಆಧಾರ ಗ್ರಂಥ

ಋಗ್ವೇದ : ೧-೨೨-೧-೧೮, ೧-೧೫೪, ೧-೯೦, ೧-೧೪೫, ೬-೪೯, ೬-೬೯ ೭-೧೦೦, ೭-೯೯

ಶತಪಥ ಬ್ರಾಹ್ಮಣ ೨-೨-೧-೫, ೨-೫-೪, ೧೩-೨-೨-೯.
ತೈತ್ತಿರೀಯ ಬ್ರಾಹ್ಮಣ ೧-೨-೫-೧,
ತೈತ್ತಿರೀಯ ಸಂಹಿತಾ ೨-೪-೧೨-೨, ೨-೧-೩.

ಟಿಪ್ಪಣಿ ವಿಷ್ಣುವು ಪೃಥ್ವೀ, ಜ್ಯೋತಿರ್ಲೋಕ, ಹಾಗೂ ಅಂತರಿಕ್ಷವನ್ನು ತನ್ನ ಮೂರು ಪಾದಗಳಿಂದ ಆಕ್ರಮಿಸಿದ ವಾಮನ ಅವತಾರದ ಕಲ್ಪನೆ ಪುರಾಣಗಳಲ್ಲಿ ಪ್ರಚಲಿತವಾಗಿದೆ ವಾಮನ ಅವತಾರ ಕಲ್ಪನೆಗೆ ಉಗಮ ಸ್ಥಾನವಾಗಿದೆ ವೇದದಲ್ಲಿ ವಿಷ್ಣುವನ್ನು ಸೂರ್ಯನ ರೂಪವೆಂದು ತಿಳಿಯಲಾಗಿದೆ ಈ ಸೂರ್ಯ ಪ್ರತಿದಿನ, ವ್ಯಾಪಿಸಿರುತ್ತಾನೆ ಋಗ್ವೇದದ ಈ ಕಥೆಯನ್ನು ಮೂಲವಾಗಿ ತೆಗೆದುಕೊಂಡು ಪುರಾಣಗಳಲ್ಲಿ ವಾಮನ ಅವತಾರದ ಕಲ್ಪನೆಯಾಗಿದೆ



# ತ್ರಿತ

"ಏನಿದು ಏನು ಮಾಡುತ್ತೀದ್ದೀರಿ ? ತ್ರಿತ ಕೂಗಿದ ಗೋಶಾಲೆ ಕಡೆ ಗೋವುಗಳೊಡನೆ ಹೋಗುತ್ತಿದ್ದ ಸಾಲಾವೃಕಿಯ ನಿರ್ದಯಿ ಪುತ್ರರು ತ್ರಿತನ ಮೇಲೆ ಆಕ್ರಮಣ ಮಾಡಿದರು.

"ಮಾನವರೇ! ಏಕೆ ಹಿಂಸಿಸುತ್ತಿದ್ದೀರಿ" ? ತನ್ನನ್ನು ರಕ್ಷಿಸಿ ಕೊಳ್ಳಲು ಪ್ರಯತ್ನಿಸುತ್ತಿದ್ದ, ಕೂಗಿಕೊಂಡ. ಅದು ನಿರ್ಜನ ಪ್ರದೇಶವಾಗಿತ್ತು ಅವನ ಕೂಗು ಅಲ್ಲಿಯೇ ಲೀನವಾಯಿತು ಅವನ ರಕ್ಷಣೆಗೆ ಯಾವ ಕಡೆಯಿಂದ ಯಾರೂ ಬರಲಿಲ್ಲ.

"ಸಾಲಾವೃಕಿಗಳೆ ಗೋವುಗಳನ್ನು ಹಿಂಸಿಸಬೇಡಿ"

ಓಡುತ್ತಿರುವ ಗೋವುಗಳನ್ನು ಹೊಡೆದು ಒಂದು ಕಡೆ ಸೇರಿಸುತ್ತಿದ್ದರು.

ಅವುಗಳನ್ನು ತಮ್ಮೊಡನೆ ಒಯ್ಯಲು ಪ್ರಯತ್ನಿಸುತ್ತಿದ್ದರು ಗೋವುಗಳು ಮುಂದೆ ಹೋಗಿ ಪುನಃ ತ್ರಿತನ ಹತ್ತಿರ ಬರುತ್ತಿದ್ದವು. ಸಾಲಾವೃಕಿಯ ಮಕ್ಕಳು ನಿರ್ದಯೆಯಿಂದ ಹೊಡೆಯುತ್ತಿದ್ದರು. ಗೋವುಗಳು ಹೆದರಿ ಹಿಂಸೆಯಿಂದ ನಡುಗುತ್ತಿದ್ದವು ಅವು ಓಡಿ ಹೋಗಲು ಪ್ರಯತ್ನಿಸುತ್ತಿದ್ದವು ವೃಕಿಗಳಿಂದ ನಾಲ್ಕು ಕಡೆಯಿಂದ ಮುತ್ತಲ್ಪಟ್ಟಿದ್ದವು

ಅವುಗಳು ಬಾಲಗಳನ್ನೆತ್ತಿ ಹಾರಲು ಪ್ರಾರಂಭಿಸಿದವು. ಅವುಗಳ ಪಾದ ಧೂಳಿ ಆಕಾಶ ಮುಟ್ಟಿತು ಈ ಕೋಲಾಹಲದಲ್ಲಿ ಶಾಂತ, ಸರಳ ಹೃದಯ ತ್ರಿತನಿಗೆ ಏನೂ ಹೊಳೆಯಲಿಲ್ಲ ಹಸುಗಳು ಅನುಭವಿಸುವ ಹಿಂಸೆಯನ್ನು ನೋಡಿ ದುಃಖಿಸಿದ ಅವುಗಳಿಗಾಗುವ ಹಿಂಸೆಯನ್ನು ತಾನೇ ಅನುಭವಿಸುವಂತಾಯಿತು.

"ಇವುಗಳನ್ನು ಏಕೆ ಹಿಂಸಿಸುತ್ತೀರಿ ? ಇವುಗಳು ನಿಮಗೆ ಏನು ಕೆಡುಕನ್ನು ಮಾಡಿದ್ದವು" ? ! ಎಂದು ಸಾಲಾವೃಕಿಗಳು ಕೈ ಜೋಡಿಸಿ ಕೇಳುತ್ತಿದ್ದ ".

ಕ್ರೂರರಾದ ದರೋಡೆ ಕೋರರು ತ್ರಿತನ ಮಾತನ್ನು ಕೇಳಲೇ ಇಲ್ಲ.

ಅವನ ಪ್ರಾರ್ಥನೆಗಳು ಕಾದ ಹಂಚಿನ ಮೇಲೆ ಬಿದ್ದ ನೀರ ಹನಿಯಂತಾಗಿತ್ತು ತ್ರಿತನು ಹಸುಗಳ ಸಮೀಪಕ್ಕೆ ಹೋಗುತ್ತಿ [illegible].

ಅವುಗಳ ಮೈಮೇಲಿನ ಬಾಸುಂಡೆಗಳನ್ನು ಸವರುತ್ತಿದ್ದ ದುಖಿಃಸುತ್ತಿದ್ದ ಹಸುಗಳು ಕರುಣೆಯಿಂದ ತ್ರಿತನನ್ನು ನೋಡುತ್ತಿದ್ದವು. ವೃಕರು ಮತ್ತೆ ಮತ್ತೆ ಹೊಡೆಯುತ್ತಿದ್ದರು ಓಡೋಡಿ ಬಂದು ಮತ್ತೆ ತ್ರಿತನನ್ನು ಸುತ್ತುವರಿಯುತ್ತಿದ್ದಿವು.

"ಹಸುಗಳು ಇವನನ್ನು ಬಿಡುವುದಿಲ್ಲ" ಎಂದರು ದರೋಡೆಕೋರರು ಇವನನ್ನು ಹಸುಗಳಿಂದ ಬೇರ್ಪಡಿಸ ಬೇಕು ಬೇರ್ಪಡಿಸಿ ಎಂದು ಕೂಗಿಕೊಂಡರು.

ಕ್ರೂರಿಗಳೂ, ಲೋಭಿಗಳೂ ದರೋಡೆಕೋರರೂ ಆದ ಸಾಲ ವಕ್ರಿಗಳು ಮಕ್ಕಳು ತ್ರಿತನನ್ನು ಬಲಾತ್ಕಾರವಾಗಿ ಹಿಡಿದುಕೊಂಡರು.

ಹಸುಗಳು ತಮ್ಮ ರಕ್ಷಕನನ್ನು ಹಿಡಿದುಕೊಂಡು ಹೋಗುತ್ತಿರುವುದನ್ನು ನೋಡಿ ಹವು, ಅವುಗಳು ಮತ್ತೆ ನಗೆದೆವು. ಮತ್ತೆ ಅವುಗಳಿಗೆ ಹೊಡೆತ ಬಿದ್ಧವು ಅವು ಚಲ್ಲಾಪಿಲ್ಲಿಯಾಗಿ ಓಡಿದವು ಸಾಲಾವೃಕಿಯ ಪುತ್ರರು ಬಲಾತ್ಕಾರವಾಗಿ ಒಂದೆಡೆ ಕೂಡಿಹಾಕಿದರು

ತ್ರಿತನು ಅವರಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಲಿಲ್ಲ. ಅವನೊಬ್ಬನೇ ಇದ್ದ. ದರೋಡೆಕೋರರು ಬಹಳ ಮಂದಿ ಇದ್ದರು ಅವರ ಬಂಧನದಲ್ಲಿ ಕದಲದೇ ನಿಂತಿದ್ದ ತ್ರಿತ ಗೋವುಗಳಿಗೆ ಆಗುತ್ತಿದ್ದ ಹಿಂಸೆಯನ್ನು ನೋಡಿ ದುಃಖಿತನಾದ. ಧಾರಾಕಾರವಾಗಿ ಅಶ್ರುಧಾರೆ ಹರಿಯುತ್ತಿತ್ತು ಒಡೆಯನ ಅಸಹಕಾಯತೆಯನ್ನು ಗೋವುಗಳು ನೋಡಿದವು ಅವುಗಳನ್ನು ರಕ್ಷಿಸಲಾರದೆ ನಿಂತ. ಪ್ರತಿಭಟನೆ ಸಲ್ಲದೆಂದು ಹಸುಗಳಿಗೂ ಅರ್ಥವಾಯಿತು.

ತ್ರಿತನನ್ನು ಬಂಧಿಸಿ ಗೋವುಗಳನ್ನು ನಿಯಂತ್ರಿಸಿದರು ತ್ರಿತನನ್ನು ಹಸುಗಳಿಂದ ದೂರವಮಾಡಿದರು ಅವುಗಳಿಗೆ ದೇವರಿಲ್ಲದಂತಾಯಿತು. ಉಪಾಯ ಕಾಣದ ಹಸುಗಳು ಹೊಸರಕ್ಷಕರಿಗೆ ಹೊಂದಿಕೊಂಡವು.

ತ್ರಿತನನ್ನು ಬಚ್ಚಿಡಲು ಸ್ಥಳವನ್ನು ಹುಡಿಕಿದರು ಯೋಗ್ಯ ಸ್ಥಳ ಸಿಕ್ಕಲಿಲ್ಲ. ಜನ ವಾಸ ಹತ್ತಿರದಲ್ಲಿ ಎಲ್ಲೂ ಕಾಣಲಿಲ್ಲ. ಅವರಿಗೆ ಹುಲ್ಲಿನಿಂದ ಮುಚ್ಚಿದ್ದ ಒಂದು ಹಳೇ ಬಾವಿ ಕಾಣಿಸಿತು. ಪಾಪಿಗಳು ಉತ್ಸಾಹದಿಂದ ಆ ಬಾವಿಯಲ್ಲಿ ತ್ರಿತನನ್ನು ಹಾಕಿದರು. ಅನಂತರ ದನಗಳನ್ನು ಹೊಡೆದುಕೊಂಡು ಹೋದರು ಗೋಧೂಳಿ ಬಾವಿಯ ಮೇಲೆ ಬಂದು ಹಾಗೆಯೆ ಲುಪ್ತವಾಯಿತು ಗೋವುಗಳನ್ನೆಲ್ಲಾ ಅಪಹರಿಸಿದರೆಂದು ತ್ರಿತನಿಗೆ ತಿಳಿಯಿತು ದರೋಡೆಕೋರರು ಹೊರಟುಹೋದರು

ಬಾವಿಯಲ್ಲಿ ನೀರಿರಲಿಲ್ಲ ಒಣಗಿತ್ತು ಹುಲ್ಲಿನಿಂದ ಮುಚ್ಚಿತ್ತು. ಅದನ್ನು ಇಟ್ಟಿಗೆಯಿಂದ ಕಟ್ಟಿದ್ದರು ಬಹಳ ದಿವಸಗಳಿಂದ ಮುಚ್ಚಿತ್ತು ಅದರ ದುರಸ್ತಿ ಯನ್ನು ಯಾರು ಮಾಡಿರಲಿಲ್ಲ ಅದರ ಇಟ್ಟಿಗೆಯ ಸಂದಿನಿಂದ ಸಣ್ಣ ಸಣ್ಣ ಗಿಡಗಳು ಬೆಳೆದಿದ್ದವು ಹುಲ್ಲು ಮತ್ತು ಗಿಡಗಳು ಬೆಳೆದಿದ್ದರಿಂದ ಸೂರ್ಯನ ಕಿರಣಗಳು ಬಾವಿ ಯೊಳಕ್ಕೆ ಬೀಳುತ್ತಿರಲಿಲ್ಲ. ತಪ್ಪಿಯಾದರೂ ಯಾರೂ ಇಲ್ಲಿಗೆ ಬರಲು ಸಾಧ್ಯವಿರಲಿಲ್ಲ ಜೋರಾಗಿ ಕೂಗಿ ಕೊಂಡರೂ ಯಾರಿಗೂ ಕೇಳಿಸುವಂತಿರಲಿಲ್ಲ

ತ್ರಿತನು ಬಾವಿಯಲ್ಲಿ ಬಿದ್ದಿದ್ದ. ಅವನನ್ನು ಜೋರಾಗಿ ತಳ್ಳಿದ್ದರು ಅವನು ಬೀಳುವ ವೇಗವನ್ನು ಬಾವಿಯಲ್ಲಿದ್ದ ಗಿಡಗಳು ತಡೆದಿದ್ದವು ಆದರಿಂದ ಅವನು ಸಾಯಲಿಲ್ಲ ಹುಲ್ಲು ಕಸ ಕಡ್ಡಿಗಳು ಇದ್ದುದರಿಂದ ಅವನ ಮೂಳೆಗಳು ಮುರಿಯಲಿಲ್ಲ ಆದರೂ ಬೀಳುವಾಗ ಇಟ್ಟಿಗೆಗಳಿಂದ ಶರೀರಕ್ಕೆ ಅಲ್ಲಲ್ಲಿ ಗಾಯ ವಾಗಿತ್ತು ಅದರಿಂದ ರಕ್ತ ಸುರಿಯುತ್ತಿತ್ತು ಅವನು ಅರ್ಧಸತ್ತವನಂತಾಗಿದ್ದ. ವಿಶಾಲವಾದ ಆಕಾಶವು ತ್ರಿತನಿಗೆ ಬಾವಿಯಿಂದ ಸ್ವಲ್ಪ ಕಾಣಿಸುತ್ತಿತ್ತು ಒಮ್ಮೊಮ್ಮೆ ಹಕ್ಕಿಗಳು ಹಾರಾಡುವುದು ಕಾಣುತ್ತಿತ್ತು ಹೊರಗಿನ ಯಾವ ಶಬ್ದವೂ ಕೇಳುತ್ತಿರ ಲಿಲ್ಲ.

ಬಾವಿಯ ತಳ ಚಿಕ್ಕದಾಗಿತ್ತು. ಕಾಲುಗಳನ್ನು ಮಾತ್ರ ನೀಡಬಹುದಾಗಿತ್ತು. ದುಂಡಾದ ಇಟ್ಟಿಗೆಗಳ ಗೋಡೆ ಇತ್ತು ಅವುಗಳ ಸಂದಿನಿಂದ ಹುಲ್ಲು ಬೆಳೆದಿತ್ತು. ಮಳೆಯಿಂದ ಇಟ್ಟಿಗೆಗಳು ಕಪ್ಪಾಗಿದ್ದವು. ಅಲ್ಲಲ್ಲಿ ಅವುಗಳ ಮೇಲೆ ಪಾಚಿ ಬೆಳೆದಿತ್ತು. ಆದು ಒಣಗಿ ಕಪ್ಪಾಗಿತ್ತು ಪ್ರಜ್ಞೆ ಬಂದ ಮೇಲೆ ಅವನಿಗೆ ನೋವಿನ ಅನುಭವವಾಗು ತ್ತಿತ್ತು. ಶರೀರದಿಂದ ರಕ್ತಹರಿದು ಒಣಗಿತ್ತು ಬೊಬ್ಬೆಗಳೂ ಸಹ ಬಂದಿದ್ದವು. ಅಲ್ಲಿಯ ಕತ್ತಲು, ಕೊಳಕು ವಾಸನೆಯಿಂದ ದುಃಖವಾಗುತ್ತಿತ್ತು. ಅವನಿಗೆ ಶರೀರ ದಿಂದ ಆತ್ಮ ಬೇರೆಯಾಗುತ್ತಿರುವಂತೆ ಭಾಸವಾಗುತ್ತಿತ್ತು ಮೃತ್ಯುಭಯದಿಂದ ಅಧೀರನಾದ ಮೃತ್ಯುಮೂರ್ತಿ ಅವನ ಮುಂದೆ ಬಂದಂತಾಗ ತ್ತಿತ್ತು ಎದ್ದುನಿಂತ ಅನೇಕ ವಿಚಾರಗಳು ಮನಸ್ಸಿಗೆ ಬಂದವು ನಾನು ಸಾಯುತ್ತೇನೆ. ನನ್ನ ಶವವನ್ನು

ಯಾರೂ ಕೊಂಡೊಯ್ಯಲಾರರು ಶರೀರವು ಇಲ್ಲೇ ಇರುತ್ತದೆ, ಕೊಳೆಯುತ್ತದೆ. ಹುಳುಗಳು ತಿನ್ನುತ್ತವೆ ಮೂಳೆಗಳು ಮಾತ್ರ ಉಳಿಯುತ್ತವೆ. ಮಳೆ ಬರುತ್ತದೆ ಭೂಮಿ ನೀರಿನಿಂದ ತುಂಬುತ್ತದೆ ಮೂಳೆಗಳು ನೀರಿನಲ್ಲಿ ಮುಳುಗುತ್ತವೆ. ಶೀತ ಕಾಲ ಬರುತ್ತದೆ. ನೀರು ಬತ್ತಿ ಹೋಗುತ್ತದೆ ಕೆಸರಿನಲ್ಲಿ ಮೂಳೆಗಳು ಇರುತ್ತವೆ ಬಿಳುಪಾದ ಮೂಳೆಗಳು ಮಣ್ಣಿನಿಂದ ಕಪ್ಪಾಗುತ್ತವೆ ಗ್ರೀಷ್ಮಋತು ಬಂದಾಗ ಅದೂ ಒಣಗುತ್ತದೆ ತ್ರಿತನು ಭೀತಿಗೊಂಡ ಗುಂಗೆ ಹುಳುವಿನಂತೆ ಅವನ ತಲೆಯಲ್ಲಿ ವಿಚಾರಗಳು ಹೊಕ್ಕವು ಇದೇ ರೀತಿ ವರ್ಷಗಳು ಕಳೆಯಬಹುದು ದಿನ ದಿನಕ್ಕೆ ಮೂಳೆಗಳೂ ಕರಗಿ ಮಣ್ಣಿನಲ್ಲಿ ಸೇರಿಹೋಗಿ ತಮ್ಮ ಅಸ್ತಿತ್ವವನ್ನು ಕಳೆದು ಕೊಳ್ಳುತ್ತವೆ

ಅಜ್ಞಾನದಿಂದ ಈ ಬಾವಿಗೆ ಬಿದ್ದ ಮಾನವ ಅಥವಾ ಪ್ರಾಣಿಗಳು ನನ್ನ ಮೂಳೆಗಳನ್ನು ನೋಡುತ್ತವೆ ನಮಗೂ ಇದೇ ಸ್ಥಿತಿ ಬರುವುದೆಂದು ಆಲೋಚಿಸುತ್ತವೆ ಅಷ್ಟರಲ್ಲಿ ಮನುಷ್ಯರು ನನ್ನನ್ನು ಮರೆತಿರುತ್ತಾರೆ ಒಂದು ಪಕ್ಷ ಯಾರಾದರೂ ಈ ಬಾವಿಯನ್ನು ಜೀರ್ಣೋದ್ಧಾರ ಮಾಡಲು ಬಂದರೆ ನನ್ನ ಮೂಳೆಗಳನ್ನು ತಗೆದು ಹೊರಗೆ ಬಿಸಾಡುತ್ತಾರೆ ಯಾರಿಗೂ ಗೊತ್ತಾಗುವುದೂ ಇಲ್ಲ ಹಿಂದೆ ಇಂದ್ರನಿಗೆ ಸೋಮರಸವನ್ನು ಸಿದ್ಧಪಡಿಸುತ್ತಿದ್ದೆ [illegible] ಸಾಮರ್ಥ್ಯವನ್ನು ನಾಶಮಾಡಲು ಮರುತ್ತುಗಳು ಅವಕಾಶ ಕೊಟ್ಟಿರಲಿಲ್ಲ ಆ ಮರುತ್ತುಗಳು ಈಗ ಶುದ್ಧವಾಯುವನ್ನು ಬೀಸಲು ಅಸಮರ್ಥರಾಗಿದ್ದಾರೆ ಮೂಳೆಗಳನ್ನು ಹೊರಗೆ ಎಸೆಯುತ್ತಾರೆ ಬಿರುಗಾಳಿ ಬೀಸುತ್ತದೆ ಗಾಳಿಯು ಅವರೊಡನೆ ಆಟವಾಡಬಹುದು ತ್ರಿತನು ತ್ರಿಶಿರಸ್ಸನ್ನು ಕೊಂದಿದ್ದ ಆ ತ್ರಿತನು ಈಗ ಎಲ್ಲರಿಂದಲೂ ಅನಪೇಕ್ಷಿತನಾಗಿದ್ದಾನೆ ನಿರ್ಬಲನಿದ್ದಾನೆ ಜೀರ್ಣನಾಗಿ ಬಾವಿಯಲ್ಲಿ ಕೊಳೆಯುತ್ತಿದ್ದಾನೆ ಯಾವತ್ರಿತನು ಸೋಮವನ್ನು ಕೊಟ್ಟು ಸೂರ್ಯನನ್ನು ತೇಜಸ್ವಿಯಾನ್ನಾಗಿ ಮಾಡಿದ್ದ ಇಂದು ಅವನಿಗೆ ಸೂರ್ಯನ ಕಿರಣಗಳೂ ಲಭ್ಯವಿಲ್ಲದಂತಾಗಿದೆ ಹೊರಗೆ ಬಿಸಾಡಿದ ನನ್ನ ಮೂಳೆಗಳನ್ನು ತನ್ನ ಕಿರಣಗಳಿಂದ ಸುಡುವಲ್ಲಿ ಹಿಂಜರಿಯುವುದಿಲ್ಲ. ರಾತ್ರಿಯಲ್ಲಿ ಗಾಳಿ ಬೀಸಿದಾಗ ಅದರಿಂದ ರಂಜಕದ ಕಿಡಿಗಳು ಬರುತ್ತವೆ. ಅವುಗಳನ್ನು ಜನಗಳು ನೋಡಿ ನೋಡಿ ಹೆದರಿ ಓಡುತ್ತಾರೆ.

ವರುಣ ನನ್ನ ಮಿತ್ರನೆ ಆದರೂ ಒಣಗಿರುವ ನನ್ನ ಬಾಯಿಗೆ ಒಂದು ಹನಿ ನೀರುಣಿಸಲು ಅಸಮರ್ಥನಾಗಿದ್ದಾನೆ. ಹೊರಗೆ ಮಳೆ ಸುರಿಸುತ್ತಾನೆ ಪ್ರವಾಹ ಬರುತ್ತದೆ ಆ ಪ್ರವಾಹ ನನ್ನ ಮೂಳೆಗಳನ್ನು ಕೊಚ್ಚಿಕೊಂಡು ಹೋಗುತ್ತದೆ ಅವುಗಳನ್ನು ನೋಡಿ ಮಕ್ಕಳು ಹೆದರುತ್ತಾರೆ ಯುವತಿಯರು ಮೂಳೆಗಳಿಂದ ತುಂಬಿರುವ ನೀರನ್ನು ತುಂಬಲು ಹೆದರುತ್ತಾರೆ.

ಇಂದ್ರ ನಿನಗೋಸ್ಕರ ಗೋವುಗಳನ್ನು ಸಂಪಾದಿಸಿದ. ಅವುಗಳ ಕಾರಣದಿಂದ ನಾನು ಬಾವಿಯಲ್ಲಿ ಬೀಳಬೇಕಾಯಿತು ಇಂದ್ರನು ಒಂದು ತೊಟ್ಟು ಹನಿ ಹಾಲು

ಕೊಡಲು ಸಮರ್ಥನಿಲ್ಲ. ನಾನೂ ಸಹ ಸಮಾನ್ಯವಾದ ಕುಶಲಕರ್ಮಿ, ಆದರೂ ವೃತ್ಯುವನ್ನು ನಿರೀಕ್ಷಿಸುತ್ತಾ ಇಲ್ಲಿ ಇದ್ದೇನೆ.

ನಾನು ತ್ರಿತ. ವರುಣನಂತೆ ನಾನೂ ಒಬ್ಬ ಋತ್ವಿಜ. ಮಂತ್ರದ್ರಷ್ಟ. ಒಬ್ಬ ಋಷಿ. ವೈದಿಕ ದೇವತೆ ಆದರೂ ಅಸಹಾಯಕ ಸಂಕಟದಲ್ಲಿ ಸಿಕ್ಕಿರುವವನು ಆಸನ್ನ ವೃತ್ಯುವನ್ನು ನೋಡುತ್ತಿರುವವನು ನನ್ನ ಯಜ್ಞದ ಭಾಗ ಸ್ತವನ, ಉಪಾಸನೆ, ತಪಸ್ಸು, ತ್ರೈಕಾಲಿಕ ಸಂಧ್ಯಾವಂದನೆ ಇವೆಲ್ಲವು ವ್ಯರ್ಥ. ಇವೆಲ್ಲ ವನ್ನೂ ಆಶ್ರಯಿಸಿದ್ದುದು ಶರೀರ ಈ ಪುರುಷಾರ್ಥಗಳೆಲ್ಲಾ ಯಾವುದಕ್ಕೂ ಬಾರ ದಂತಾಗಿದೆ."

ತ್ರಿತನು ವ್ಯಾಕುಲನಾದ ಮೇಲೆ ಆಕಾಶವನ್ನು ನೋಡಿದ ಹುಲ್ಲು ಮತ್ತು ಗಿಡಗಳ ಸಂದಿನಿಂದ ಬೆಳಕಿನೆಡೆ ನೋಡಿದ ಬಾವಿಯು ಇಟ್ಟಿಗೆ ಒಂದು ಕಡೆ ಬಿದ್ದು ಹೋಗಿತ್ತು. ಅಲ್ಲಿ ಒಂದು ಗೂಡಿತ್ತು. ಅಲ್ಲಿ ಒಂದು ಗೂಬೆ ಕುಳಿತಿತ್ತು. ಇವನನ್ನು ಅಣಕಿಸುವಂತೆ ನೋಡುತ್ತಿತ್ತು.

ತ್ರಿತನಿಗೆ ಮೂರ್ಛೆ ಬಂದತಾಗಿತ್ತು ಜೀವನ ಮುಗಿದಂತಾಗಿತ್ತು ಅವನಿಗೆ ಪ್ರಪಂಚದಲ್ಲಿ, ಈ ಸಮಯದಲ್ಲಿ ತಿರುಗಾಡುತ್ತಿರುವ, ನಗೆದಾಡುತ್ತಿರುವ, ತಿನ್ನುತ್ತಿ ರುವ ಕುಡಿಯುತ್ತಿರುವ, ಮಲಗುತ್ತಿರುವ, ಆಮೋದ ಪ್ರಮೋದಗಳಲ್ಲಿರುವ ನರನಾರಿ ಯರ ಬಗೆಗೆ ತಿರಸ್ಕಾರ ಹುಟ್ಟಿತ್ತು ಅವನಿಗೆ ಸಿಟ್ಟು ಬಂದಿತು ಅವನ ಸ್ಥಿತಿಯ ಬಗೆಗೆ ಯಾರಿಗೂ ಕರುಣೆ ಇರಲಿಲ್ಲ ಅವನನ್ನು ಯಾರೂ ಸ್ಮರಿಸುತ್ತಲೂ ಇರಲಿಲ್ಲ ಅವನನ್ನು ಬಾವಿಯಿಂದ ಹೊರಗೆ ತರಲು ಯಾರೂ ಪ್ರಯತ್ನಿಸಲಿ ಇಲ್ಲ ಜೀವ ಉಳಿಸಲು ಯಾರೂ ಇಲ್ಲ ಜಗತ್ತು ನನ್ನನ್ನು ತಿರಸ್ಕರಿಸಿದೆ ಎಂದು ಕ್ಷೋಭೆಗೊಂಡ

ತ್ರಿತನು ವಿಚಲಿತನಾದ ವ್ಯಗ್ರನಾಗಿ ಮೇಲೆದ್ದ. ಮೇಲೆ ಬೆಳೆದಿರುವ ಹುಲ್ಲಿ ನಲ್ಲಿ ಸರಸರ ಶಬ್ದವಾಯಿತು ಅವನು ಮೇಲೆದ್ದದ್ದರಿಂದ ಗಿಡಗಳಲ್ಲಿ ಕುಳಿತ್ತಿದ್ದ ಗುಬ್ಬಚ್ಚಿಗಳು ಶಬ್ದಮಾಡುತ್ತಾ ಹಾರಿದವು ನನಗೂ ನಹ ರೆಕ್ಕೆಗಳಿದ್ದಿದ್ದರೆ ನಾನು ಹಾರಿ ಹೋಗಬಹುದೆಂದು ಯೋಚಿಸದ ಹತಾಶನಾಗಿ ಮತ್ತೆ ಕುಳಿತ. ಆಶ್ರಮ, ಯಜ್ಞ ಎಲ್ಲವೂ ಜ್ಞಾಪಕಕ್ಕೆ ಬಂದವು ಯಾವಾಗಲೂ ದೇವತೆಗಳಿಗೆ ಹವಿಸ್ಸನ್ನು ಕೊಡುತ್ತಿದ್ದ ,ಸ್ತುತಿಸುತ್ತಿದ್ದ ಇಂದು ಯಾರೂ ಇಲ್ಲ ಎಲ್ಲರೂ ಮಾಯವಾಗಿ ದ್ದಾರೆ, ಎಂದು ಅಲುಬಿದ ಯೋಚಿಸುತ್ತಾ ವ್ಯಥೆಗೊಂಡ ಮೊಣಕಾಲಿನ ಮೇಲೆ ಕೈಯಿಟ್ಟು ಕುಳಿತ ತನ್ನಲ್ಲಿಯೆ ಮಗ್ನನಾದ ತನ್ನ ಜೀವನ ಸ್ಮರಣೆಗೆ ಬಂದಿತ್ತು ತಾಯಿಯ ಗರ್ಭದಲ್ಲಿದ್ದಾಗ, ನನ್ನ ಪೋಷಣೆಯನ್ನು ಯಾರು ಮಾಡಿದರು ? ಆ ಸಂಕುಚಿತ ಸ್ಥಳದಲ್ಲಿ ಹೇಗೆ ಬೆಳೆದೆ. ಇದು ಸ್ಮರಣೆಗೆ ಬಂದ ಕೂಡಲೇ ಅವನ ಚೈತನ್ಯ ಜಾಗೃತವಾಯಿತು.

"ಚಂದ್ರನು ಅಂತರಿಕ್ಷದಲ್ಲೂ, ಸೂರ್ಯನು ಆಕಾಶದಲ್ಲೂ ಸಂಚರಿಸುತ್ತಾರೆ. ಮನುಷ್ಯರು ನಿಮ್ಮನ್ನು ನೋಡುವಲ್ಲಿ ಅಸಮರ್ಥರು ಸ್ತ್ರೀಯನ್ನು ಪತಿ ಕಾಪಾಡು

ತ್ತಾನೆ. ಧನಾಕಾಂಕ್ಷಿಗಳು ಧನವನ್ನು ಗಳಿಸುತ್ತಾರೆ. ಪತಿ ಪತ್ನಿಯರು ಮಕ್ಕಳನ್ನು ಹುಟ್ಟಿಸುತ್ತಾರೆ. ಎಲೈ ರೋದಸಿ! ನನ್ನ ಕಷ್ಟಗಳನ್ನು ನೋಡು" ಎಂದು ನಮ್ರತೆಯಿಂದ ಪ್ರಾರ್ಥಿಸಿದ.

"ನಾನು ಪುತ್ರಕ ಅಗ್ನಿಯನ್ನು ಕೇಳುತ್ತೇನೆ. ದೇವದೂತನೇ ಉತ್ತರಿಸು ಪ್ರಾಚೀನ ಕಾಲದ ನಿಯಮವೆಲ್ಲಿ? ಯುಪಕರು ಅದನ್ನು ಎಲ್ಲಿ ಪಾಲಿಸುತ್ತಾರೆ? ದೇವಗಣಗಳೇ ನಿಮಗೆ ಜ್ಯೋತಿರ್ಮಯ ಆಕಾಶದಲ್ಲಿ ಸ್ಥಾನವಿದೆ ನಿಮ್ಮ ನಿಯಮವೇನು? ಅದಕ್ಕೆ ವಿಪರೀತವಾದುದು ಯಾವುದು ಪ್ರಾಚೀನ ಆಹ್ವಾನ ವೇನಾಯಿತು? ದೇವಗಣಗಳೆ! ನಿಮ್ಮ ನಿಯಮಗಳಿಗೆ ಆಧಾರವೇನು? ವರಣನೆಲ್ಲಿದ್ದಾನೆ? ದುಷ್ಟರನ್ನು ಶಿಕ್ಷಿಸುವವರು ಎಲ್ಲಿ ಇದ್ದಾರೆ ನಾನು ಸೋಮರಸವನ್ನು ಸಿದ್ಧಪಡಿಸುವವನು, ಅನೇಕ ಶಾಸ್ತ್ರಗಳನ್ನು ಹಿಂದೆಯೆ ಹೇಳಿದೆ. ಬಾಯಾರಿದ ಜಿಂಕೆಯನ್ನು ತೋಳ ತಿನ್ನುವಂತೆ ನನ್ನ ಮನಸ್ಸಿನ ವ್ಯಥೆಯು ನನ್ನನ್ನು ತಿನ್ನುತ್ತದೆ"

"ಇಬ್ಬರು ಪತ್ನಿಯರು ಗಂಡನನ್ನು ಪೀಡಿಸುವಂತೆ ನನ್ನನ್ನು ನಾಲ್ಕುಕಡೆ ಇರುವ ಬಾವಿಯ ಗೋಡೆಗಳು ಪೀಡಿಸುತ್ತಿವೆ. ನಾನು ಜಲಪುತ್ರ ತ್ರಿತನೆಂದು ಗೊತ್ತು. ಸಪ್ತಾಶ್ವಗಳ ಒಡೆಯ ಸೂರ್ಯನು ನನ್ನ ಪಿತೃ ಸಂಬಂಧಿ ಅವನ ಕಿರಣಗಳನ್ನು ಸ್ತೋತ್ರಮಾಡುತ್ತೇನೆ. ಆಕಾಶದಲ್ಲಿ ಅಗ್ನಿ, ವಾಯು, ಸೂರ್ಯ, ಇಂದ್ರ ವಿದ್ಯುತ್ ಈ ಐದು ಜನ ವೀರರಿದ್ದಾರೆ ಈ ಐವರು ನನ್ನ ಪ್ರಾರ್ಥನೆಯನ್ನು ತಿಳಿಸಿ ಹಿಂತಿರುಗಲಿ ದೇವಗಣಗಳೆ! ಈ ನನ್ನ ವಿನೂತನ ಸ್ತೋತ್ರ ಹೊಗಳತಕ್ಕದು. ಹಿತಕರವೂ ಅಹುದು ಮಂಗಳವನ್ನು ಸಾರುತ್ತದೆ. ನದಿಗಳು ದೇವತೆಗಳ ನಿಯಮದಂತೆ ಹರಿಯುತ್ತಿವೆ. ಸೂರ್ಯನು ಸತ್ಯದ ಪ್ರಚಾರಕ ಅಗ್ನಿಯೇ! ದೇವತೆಗಳೊಡನೆ ನಿನ್ನ ಸಂಬಂಧ ಹೊಗಳುತಕ್ಕದ್ದೇ ವರಣನು ಮಂತ್ರಿಗಳ ರೂಪದಲ್ಲಿ ಪ್ರಾರ್ಥನೆಗಳನ್ನು ರಚಿಸುತ್ತಾನೆ ಆ ಸ್ತುತಿಗಳಿಂದ ನಾವು ಪೂಜಿಸುತ್ತೇವೆ ಅವುಗಳಿಂದ ಸತ್ಯ ಹೊರಬರುತ್ತದೆ ದೇವಗಣಗಳೇ ಆಕಾಶದಲ್ಲಿ ಮಾರ್ಗದರ್ಶಕನಂತಿರುವ ಸೂರ್ಯನು ಸ್ತುತಿಗೆ ಯೋಗ್ಯನಾದವನು ಅವನನ್ನು ತಿರಸ್ಕರಿಸಬಾರದು. ಮಾನವರೆ! ಅವನ ಶಕ್ತಿಯನ್ನು ತಿಳಿಯಿರಿ ನಾನು ಪ್ರತಿದಿನ ಮೇಲೆ ಹೋಗುತ್ತಿರುವ ಚಂದ್ರನನ್ನು ನೋಡುತ್ತೇನೆ. ತನ್ನ ವೀರ ಮಿತ್ರರೊಡಗೂಡಿದ ಇಂದ್ರನಿಗೆ ಜಯವಾಗಲಿ ಎಂದು ಪ್ರಾರ್ಥಿಸುತ್ತೇನೆ ಮಿತ್ರ, ವರುಣ, ಅದಿತಿ, ಸಿಂಧು, ಪೃಥ್ವೀ, ಆಕಾಶ ಇವರೇ ನನ್ನ ಸ್ತೋತ್ರಕ್ಕೆ ಸಾಕ್ಷಿಗಳಾಗಲಿ" ಎಲ್ಲಾ ದೇವತೆಗಳನ್ನು ತ್ರಿತ ಆಹ್ವಾನಿಸಿದ.

ಇವನ ಪ್ರಾರ್ಥನೆಯಿಂದ ಬೃಹಸ್ಪತಿಗೆ ಮನ ಕರಗಿತು ಅವನು ತ್ರಿತನ ಹತ್ತಿರ ಬಂದ. ತ್ರಿತ ನೋಡಿದ.

"ಬೃಹಸ್ಪತಿಯೇ! ವರುಣನ ಸರ್ವದರ್ಶಿ ಶಕ್ತಿ ಎಲ್ಲಿ ಹೋಯಿತು? ದೇವತೆಗಳ ಸರ್ವದರ್ಶನ ಶಕ್ತಿ ಏನಾಯಿತು ನನ್ನ ಈ ಕರುಣಾ ಪೂರ್ಣಸ್ಥಿತಿಯನ್ನು ನೋಡುತ್ತಿಲ್ಲವೆ?" ಎಂದು ತ್ರಿತ ಕೇಳಿದ.

"ತ್ರಿತ" ಇವನ ದಯನೀಯ ಸ್ಥಿತಿಯನ್ನು ನೋಡಿ ಬೃಹಸ್ಪತಿಗೆ ದುಃಖ ವಾಯಿತು.

"ನಿನ್ನ ಅವಸ್ಥೆಯನ್ನು ನೋಡಿ ಕಠಿನ ಹೃದಯಿಗೂ ದುಃಖವಾಗುತ್ತದೆ."

"ಬೃಹಸ್ಪತಿ ಈ ಬಾವಿಯ ನಿರ್ಜೀವ ಇಟ್ಟಿಗೆಗಳು ನನ್ನನ್ನು ಜೀವರಹಿತ ನನ್ನಾಗಿ ಮಾಡಿವೆ ಎಂದು ನಮಸ್ಕರಿಸುತ್ತಾ ಹೇಳಿದ.

"ಮಂತ್ರವಿವನೆ ನಿನಗೆ ಶುಭವಾಗುತ್ತದೆ. ನಿರಾಶನಾಗಬೇಡ" ಎಂದು" ಪ್ರೇಮದಿಂದ ಹೇಳಿದ.

ದೇವ ಗುರು ! ನಾನು ದೇವತೆಗಳ ಸ್ತುತಿ ಮಾಡುತ್ತಿದ್ದೆ.

"ಮೊದಲೇ ಮಾಡಿದ್ದೆ ಈಗಲೂ ಮಾಡುತ್ತಿದ್ದೇನೆ ಆದರೆ ಯಾರೂ ನನ್ನನ್ನು ನೋಡುತ್ತಿಲ್ಲ" ಎಂದು ದೇವತೆಗಳ ಔದಾಸೀನ್ಯವನ್ನು ನೆನೆದು ಹೇಳದ

"ತ್ರಿತ ನಿನ್ನ ಪವಿತ್ರ ಯಜ್ಞಕ್ಕೆ ಎಲ್ಲರೂ ಬರುತ್ತಾರೆ ಅವರು ಇಲ್ಲಿಗೆ ಬರುವಂತೆ ಹೇಳುತ್ತೇನೆ" ಎಂದು ವಿಶ್ವಾಸದಿಂದ ಹೇಳಿದ ಬೃಹಸ್ಪತಿ

"ತಮ್ಮ ಅನುಗ್ರಹ "

"ತ್ರಿತ ಹೊರಗೆ ಬಾ" ಬೃಹಸ್ಪತಿಯು ತ್ರಿತನನ್ನು ಉದ್ಧಾರ ಮಾಡಿದ ತ್ರಿತ ಮೇಲೆ ಬಂದು ನೋಡಿದ ಅವನಿಲ್ಲದೆ ಜಗತ್ತಿನಲ್ಲಿ ಯಾವ ಬದಲಾವಣೆಯೂ ಆಗಿರಲಿಲ್ಲ. ಎಲ್ಲಾ ಕೆಲಸಗಳೂ ಯಥಾರೀತಿ ನಡೆಯುತ್ತಿದ್ದವು. ಅದರಲ್ಲಿ ಒಬ್ಬನ ಅಭಾವವಿತ್ತು. ಅದು ತಾನೇ ಆಗಿದ್ದ. ಬೃಹಸ್ಪತಿಯು ಸಾಲವೃಕಿಯ ಪುತ್ರರಿಂದ ತ್ರಿತನ ಗೋವುಗಳನ್ನು ಬಿಡಿಸಿ ತಂದುಕೊಟ್ಟ

ತ್ರಿತನು ಯಜ್ಞ ಮಾಡಲು ಒಂದು ದೊಡ್ಡ ಯೋಜನೆಯನ್ನು ಹಾಕಿದ. ಬೃಹಸ್ಪತಿಯ ದೆಸೆಯಿಂದ ಸ್ವರ್ಗ, ಅಂತರಿಕ್ಷ ಮತ್ತು ಪೃಥ್ವಿಯ ದೇವತೆಗಳೆಲ್ಲರೂ ಆ ಯಾಗಕ್ಕೆ ಬಂದರು ಬೃಹಸ್ಪತಿಯ ಜೊತೆಯಲ್ಲಿ ಯಜ್ಞಭಾಗವನ್ನು ಸ್ವೀಕರಿಸದರು

ಆಧಾರ ಗ್ರಂಥ

ಋಗ್ವೇದ ೧-೧೦೫, ೧-೧೮೯, ೫-೪೧, ೮-೪೭, ೧೦-೮, ೧-೨೨, ೧೭-೧೮, ೧-೯೦-೯, ೧-೧೫೪-೫, ೧-೧೫೫-೪' ೭-೪೯, ೬-೬೯, ೭-೯೯,

ಶತಪಥ ಬ್ರಾಹ್ಮಣ ೧-೨-೩, ೧-೩-೧-೧, ೨-೨-೧-೫, ೧-೨-೫-೫, ೧೩-೨-೨-೯,

ಜೈಶ ಬ್ರಾಹ್ಮಣ ೮-೩೩-೧೯,

ತೈತ್ತಿರೀಯ ಬ್ರಾಹ್ಮಣ ೩-೨-೮-೧೦-೧೨, ೧-೨-೫-೧,

ತೈತ್ತಿರೀಯ ಸಂಹಿತಾ ೨-೪-೧೨-೨, ೨-೧-೩.

ಬೃಹದ್ದೇವತಾ ೩-೧೩೨-೧೩೭, ೨-೬೪

**ಟಿಪ್ಪಣಿ** ತ್ರಿತನ ಕಥೆ ಸ್ಪಷ್ಟವಾಗಿದೆ ಇದು ಒಂದು ಒಳ್ಳೆಯ ಕಥೆ ಆದರೆ ಇದರಲ್ಲಿ ಆಧ್ಯಾತ್ಮಿಕ ಭಾವನೆ ಏನೆಂಬುದೇ ಪ್ರಶ್ನೆ ಪ್ರಾಯಃ ತ್ರಿತನಿಂದ ತ್ರಿದೇವ ಸಿದ್ಧಾಂತ ವಿಕಾಸ ಹೊಂದಿರಬಹುದು. ತ್ರಿತನಿಗೆ ಮೂವರು ಸಹೋದರರಿದ್ದರು ಇದು ನನ್ನ ಊಹೆ.

**ಆರ್ಯಮಾ** ದ್ವಾದಶಾದಿತ್ಯರಲ್ಲಿ ಒಬ್ಬ ದೇವತೆ ಉತ್ತರ ಫಲ್ಗುನೀ ನಕ್ಷತ್ರಕ್ಕೆ ಮತ್ತು ವೈದಿಕ ದೇವತೆಗಳ ಜೊತೆಯಲ್ಲಿ ಇವನನ್ನು ಸೇರಿಸುತ್ತಾರೆ ಮಿತ್ರ ವರುಣ ಮತ್ತು ಆರ್ಯಮಾರ ಹೆಸರು ಜೊತ ಜೊತೆಯಲ್ಲಿಯೇ ಹೇಳುತ್ತಾರೆ ತಂದೆ ಕಶ್ಯಪ. ತಾಯಿ ಅದಿತಿ

**ತ್ರಿತ** ಇವನೊಬ್ಬ ಋಷಿ ಕೆಲವರು ದೇವತೆ ಎನ್ನುತ್ತಾರೆ ವಿಭೂವಸನ ಮಗ ತ್ರಿತನೆನ್ನುತ್ತಾರೆ ಸಾಯಣನು (ಋ-೧೧-೦೫-೧೮) ಏಕತ, ದ್ವಿತ, ತ್ರಿತ ಈ ಮೂವರು ಬಂಧುಗಳೆಂದು ತನ್ನ ಭಾಷ್ಯದಲ್ಲಿ ಹೇಳಿದ್ದಾನೆ ತ್ರಿತನ ವಾಸ ಸ್ಥಳಯಾವುದೆಂದು ತಿಳಿದಿಲ್ಲ. ಅವಸ್ಥಾ ಗ್ರಂಥವಲ್ಲಿ ಥ್ರಿತ ತ್ರಿತದ ಅಪಭ್ರಂಶವಾಗಿದೆ ಇವನು ಒಬ್ಬ ಮನುಷ್ಯನೆಂದು ಹೇಳಿದೆ ಹಾಗೆ ಫಾರಸೀ ಥರ್ವ ಗ್ರಂಥವಲ್ಲಿ ಅಥವ್ಯ ಎಂದಿದೆ. ಇದು ಅಪತ್ಯದ ಅವಭ್ರಂಶ, ಇವನನ್ನು ದೇಹ ಧಾರೀ ಮನುಷ್ಯನಿಗೆ ಹ ಓಮ ಅಂದರೆ ಸೋಮನೆಂದಿವೆ ತ್ರಿತ ಶಬ್ದ ಯುನಾನಿ ತ್ರಿಸೋನ ಶಬ್ದದ ಸಮಾನಾರ್ಥಕ ಶಬ್ದ

**ಬಲ** ಒಬ್ಬ ರಾಕ್ಷಸನ ಹೆಸರು ಅಂಗಿರಸನ ಆಜ್ಞೆಯಂತೆ ಇಂದ್ರನು ಇವನನ್ನು ಕೊಂದ ಬಲನು ಹಸುಗಳ ರಕ್ಷಕನಾಗಿದ್ದ ಇಂದ್ರನು ಇವನ ಕೋಟೆಯನ್ನು ಹಾಳುಮಾಡಿದ. ಇವನ ಗುಹೆಯ ವರ್ಣನೆಯನ್ನು ನಾವು ಕಾಣಬಹುದು ವೃತ್ರನ ಸಹೋದರನು ಬಲನೆಂದು ಹೇಳುತ್ತಾರೆ ಇಂದ್ರನಿಗೆ ಬಲವೃತ್ರ ಇನ್ ಎಂದೂ ಕರೆಯುತ್ತಾರೆ 'ಬಲಂಜ' ಅಂದರೆ ಬಲವನ್ನು ನಾಶಮಾಡುವವನು ಎಂಬ ಉಪಾಧಿಯೂ ಇಂದ್ರನಿಗೆ ಇದೆ.



# ಶುನಃ ಶೇಪ

ಯಾಗಶಾಲೆಯಲ್ಲಿ ಮೂರು ಯೂಪಸ್ತಂಭಗಳಿದ್ದವು ಬಲಿ ಕೊಡಲು ಶುನಃ ಶೇಪನನ್ನು ಹಗ್ಗಗಳಿಂದ ಕಟ್ಟಿದ್ದರು ಆವನು ಮುಕ್ತನಾಗಿರಲಿಲ್ಲ. ಅವನು ಜೀವನದ ಆಸೆಯನ್ನು ಬಿಟ್ಟಿದ್ದ ಯಜ್ಞದ ಅಗ್ನಿಜ್ವಾಲೆ ಪ್ರಜ್ವಲವಾಗಿತ್ತು ತನ್ನ ಜೀವಉಳಿಕೆಗಾಗಿ ಕಾತರನಾಗಿದ್ದ.

ಯಜಮಾನನು ಯಜ್ಞದ ಆಹುತಿಗಾಗಿ ಅವನನ್ನು ಆರಿಸಿದ್ದ ಅವನು ಹವಿಸ್ಸಾಗಿದ್ದ ಪವಿತ್ರ ಹವನ ವಸ್ತುವಾಗಿದ್ದ ಆ ಪಾವಿತ್ರತೆಯು ಅವನನ್ನು ಮುಕ್ತನನ್ನಾಗಿ ಮಾಡಲಿಲ್ಲ ಅವನನ್ನು ಮುಕ್ತನನ್ನಾಗಿ ಮಾಡಲು ಯಾರಿಗೂ ಆಸಕ್ತಿ ಇರಲಿಲ್ಲ. ಅವನನ್ನು ಬಲಿ ಕೊಡುವುದರಲ್ಲಿ ಜನರಿಗೆ ಸುಖವಿತ್ತು, ಅವನ ದುಃಖ ಜನಗಳಿಗೆ ಸುಖವಾಗಿತ್ತು ಅವನ ನಾಶ ಇವರ ಪುಣ್ಯೋದಯವಾಗಿತ್ತು

ಮೃತ್ಯು ಇವನನ್ನು ನೋಡುತ್ತಿತ್ತು ಯಜ್ಞಜ್ವಾಲೆಗೂ ಹಸಿವಾಗಿತ್ತು. ಮಂಗಲಮಯವಾದ ವೇದಗಾನವು ಇವನಿಗೆ ಅಮಂಗಲ ಕಾರಕವಾಗಿತ್ತು ಹೇಗಾದರೂ ಶರೀರವನ್ನು ರಕ್ಷಿಸಿಕೊಳ್ಳಬೇಕೆಂದಿದ್ದ ಯಜಮಾನನು ಇವನನ್ನು ಬಲಿ ಕೊಟ್ಟು ತನ್ನ ಭವಿಷ್ಯದ ಸುಂದರ ಕನಸು ಕಾಣುತ್ತಿದ್ದ ಆದರೆ ಶುನಃಶೇಪ ನಿಸ್ಸಹಾಯಕನಾಗಿ ಹತಾಶನಾಗಿದ್ದ

ಅವನ ದಷ್ಟ ಪುಷ್ಟ ಶರೀರದ ಮಾಂಸವು ಆಹುತಿಯಾಗುವುದನ್ನು ನೋಡಲು ಜನರು ಕಾತರರಾಗಿದ್ದರು ಜನಗಳ ಸ್ವಾರ್ಥ ಅವನ ವಿನಾಶವೇ ಆಗಿತ್ತು ಅವನ ಸ್ವಾರ್ಥ ಅಂದರೆ ತನ್ನ ರಕ್ಷಣೆಯು ಪರಸ್ಪರ ವಿರೋಧೀ ಸಂಘರ್ಷಗಳಲ್ಲಿ ಜೀವನ್ಮೃತ್ಯುದ್ವಂದ್ವದಲ್ಲಿ ಸಾವು ಜೀವಿತೆ ಈ ದ್ವಂದ್ವಗಳ ಮಧ್ಯೆ ಈ ನಿಸ್ಸಹಾಯಕ ಅವಸ್ಥೆಯಲ್ಲಿ ಒಂದೇ ಒಂದು ವಿ[illegible]ಸ ಎಂದರೆ ವರುಣನೇ

ಹಗಲು ರಾತ್ರಿ ಬಂಧನವಲ್ಲಿರುವ ನಾನು ವರುಣನನ್ನು ಸ್ತೋತ್ರಮಾಡುತ್ತೇನೆ

"ಈ ಪಾಶದಿಂದ ನನ್ನನ್ನು ಬಿಡಿಸು ಅಗ್ನಿಗೆ ಆಹಾರವನ್ನಾಗಿ ನನ್ನನ್ನು ಮಾಡಬೇಡ" ಎಂದು ಕ್ಷೀಣಸ್ವರದಿಂದ ಪ್ರಾರ್ಥಿಸಿದ

ಶುನಃಶೇಪನ ಸ್ಥಿತಿ ಬಹಳ ಶೋಚನೀಯವಾಗಿತ್ತು ಆಸನ್ನ ಮೃತ್ಯು ಅವನ ಕಣ್ಣಲ್ಲಿ ಬಂದು ಹೋಗುತ್ತಿತ್ತು ಜಗತ್ತು ಯಾವ ಕ್ಷಣದಲ್ಲಿಯಾದರೂ ಅವನಿಂದ ಲೋಪವಾಗುತ್ತಿತ್ತು ಸುಂದರವೂ, ಸುಖಪ್ರದವೂ ಆದ ಜಗತ್ತನ್ನು ನೋಡಲು ಸಾಧ್ಯವಿರುತ್ತಿರಲಿಲ್ಲ ಕ್ಷಣಮಾತ್ರದಲ್ಲಿ ಹಾಹಾಕಾರಮಾಡುತ್ತಾ ಸಾಯುವವನಿದ್ದ ಅವನ ಸುಂದರ ಶರೀರ ಭಸ್ಮವಾಗುವುದಿತ್ತು ಇವು ಜ್ಞಾಪಕಕ್ಕೆ ಬರುತ್ತಲೇ ಮೃತ್ಯು ಭಯದಿಂದ ತತ್ತರಿಸುತ್ತಿದ್ದ ಅವನ ದಯನೀಯವಾಣಿ ಯಜ್ಞಮಂಟಪದಲ್ಲಿ ಪ್ರತಿಧ್ವನಿಸಿತು ಅದು ಜನಗಳಿಗೆ ಕುತೂಹಲ ಸಾಮಗ್ರಿಯಾಯಿತು ಅವನ ಅಸಹಾಯ ಕಥೆಯು ಜನಗಳಿಗೆ ಹಾಸ್ಯಮಯವಾಯಿತು ಅವನ ಹೇಡಿತನ ಜನಗಳಿಗೆ ಮನರಂಜನೆಯ ವಸ್ತುವಾಗಿತ್ತು ಜನರ ನಿರ್ದಯತೆಯನ್ನು ನೋಡಿ ಕಣ್ಣು ಮುಚ್ಚಿಕೊಂಡು

"ಹೆ ವರುಣ! ಯಜ್ಞ ಮತ್ತು ಆಹುತಿಯನ್ನು ನಿವಾರಿಸು ಮಂಗಲವನ್ನುಂಟು ಮಾಡುವ ವರುಣನೇ ನನ್ನ ಪಾಪಗಳನ್ನು ಪ್ರತ್ಯಕ್ಷವಾಗಿ ಬಂದು ಹೋಗಲಾಡಿಸು" ಎಂದ

ಹಗ್ಗಗಳಿಂದ ಕಟ್ಟಿದ್ದ ಶುನಃಶೇಪನ ಕಣ್ಣುಗಳಿಂದ ಧಾರಾಕಾರವಾಗಿ ನೀರು ಸುರಿಯುತ್ತಿತ್ತು. ಅವನ ಸ್ಥಿತಿಯು ಜನಗಳಿಗೆ ಆಶ್ಚರ್ಯವನ್ನುಂಟುಮಾಡಿತು.

ಮನುಷ್ಯನಾಗಿ ಬಲಿಗೆ ಹೆದರುತ್ತಾನೆ. ಮೃತ್ಯುವಿಗೆ ಹೆದರುತ್ತಾನೆ. ದೇವಕಾರ್ಯ ದಲ್ಲಿ ಸಂತೋಷವಾಗಿರುವುದಕ್ಕೆ ಬದಲಾಗಿ ಅಳುತ್ತಿದ್ದಾನೆ ಸ್ವರ್ಗಮಾರ್ಗದಿಂದ ತಪ್ಪಿಸಿಕೊಳ್ಳುತ್ತಿದ್ದಾನೆ. ಅವನ ವರ್ತನೆಯಿಂದ ಜನರು ಅಸಂತುಷ್ಟರಾದರು. ಕೆಲವ ರಿಗೆ ಅವನ ಬಗ್ಗೆ ತಿರಸ್ಕಾರ ಉಂಟಾಯಿತು.

"ದೇವರೇ ನನ್ನ ಈ ಆದಿಮಧ್ಯ ಅಂತ್ಯದಲ್ಲಿರುವ ಹಗ್ಗಗಳನ್ನು ನಾಶ ಮಾಡೆಂದು ಪ್ರಾರ್ಥಿಸಿದ"

"ವರುಣ ನಿಷ್ಠಾವಂತ ಯಜಮಾನನಂತೆ ಸಾಧಾರಣ ಹವಿಸ್ಸನ್ನು ತ್ಯಜಿಸುವವ ನಲ್ಲ ಆಕಾಶದಲ್ಲಿ ಪಕ್ಷಿಗಳ ಮಾರ್ಗವನ್ನು ಗುರುತಿಸುತ್ತೀ ಹನ್ನೆರಡು ತಿಂಗಳ ಅನಂ ತರ ಅಧಿಕಮಾಸವೂ ನಿನಗೆ ಗೊತ್ತು ವಿಶಾಲವೂ, ಉನ್ನತವೂ, ಮಹಾನ್ ವಾಯು ವಿನ ಮಾರ್ಗವೂ ನಿನಗೆ ತಿಳಿದಿದೆ ಅಘಟಿತ ಘಟನೆಗಳನ್ನು ತಿಳಿಯಬಲ್ಲವನಾಗಿ ದ್ದೀಯೆ. ವರುಣ ! ನನ್ನ ಪ್ರಾರ್ಥನೆಯನ್ನು ಕೇಳು ಇಂದು ಸಂತೋಷವಾಗಿರುವ ದಿನ ಮುಕ್ತಿಯನ್ನು ಉದ್ದೇಶಿಸಿ ಕರೆದಿದ್ದೇನೆ. ನೀನು ಮೇಧಾವಿ, ಆಕಾಶ ಪೃಥ್ವೀ ಹಾಗೂ ವಿಶ್ವದಲ್ಲಿ ಪ್ರಕಾಶಿಸುವವನಾಗಿದ್ದೀಯೆ ನನ್ನ ಪ್ರಾರ್ಥನೆ ನಿನಗೆ ಕೇಳಿದ್ದರೆ ಉತ್ತರಿಸು" ಎಂದು ಮತ್ತೆ ಪ್ರಾರ್ಥಿಸಿದ

ಸಹಸ್ರಯುಗಗಳಿಂದ ಬಂಧಿತನಾದ ಶುನಃಶೇಪನು ಹವ್ಯವಾಹನ ಅಗ್ನಿಯನ್ನು ಸ್ತುತಿಸಿದ.

"ಹೇ ಅಗ್ನಿ ! ನೀನು ಯಾವಾಗಲೂ ಯುವಕನೆ ತೇಜಸ್ವೀ, ನಿನ್ನ ಪುತ್ರನಿಗೆ ಪ್ರೀತಿ ಪಾತ್ರನಾದ ತಂದೆ, ಸಂಬಂಧಿಗಳಿಗೆ ಸಂಬಂಧಿ ಮಿತ್ರನಿಗೆ ಮಿತ್ರ ದೇವತೆಗ ಳನ್ನು ಪೂಜಿಸುತ್ತಾ ನಿನಗೆ ಹವಿಸ್ಸನ್ನು ಕೊಡುತ್ತೇನೆ ದೇವತೆಯಾದ ಅಗ್ನಿಯೆ ! ನೀನು ಯಜ್ಞಕ್ಕೆ ಚಕ್ರವರ್ತಿ ಪ್ರಾರ್ಥಿಸುವುದರ ಮೂಲಕ ನಿನ್ನನ್ನು ಪೂಜಿಸುತ್ತೇನೆ" ಎಂದು ಸ್ತುತಿಸಿದ.

ಅನಂತರ ಸೋಮ ಮತ್ತು ಇಂದ್ರರನ್ನು ಸ್ತುತಿಸಿದ, "ಹೇ ಇಂದ್ರ ! ಸ್ತ್ರೀಯರು ಸೋಮರಸವನ್ನು ಸಿದ್ಧಪಡಿಸುವಾಗ ಉಂಟಾಗುವ ಶಬ್ದವನ್ನು ಕೇಳಿ ಅಲ್ಲಿಗೆ ಹೋಗಿ ಸೋಮರಸವನ್ನು ಕುಡಿ. ವನಸ್ಪತಿಗಳೇ ! ವನದೇವತೆಗಳೇ ! ಸೋಮಲತೆಯಿಂದ ರಸವನ್ನುಂಟುಮಾಡಿ ಇಂದ್ರನಿಗೆ ಕೊಡಿ" ಎಂದು ಸೋಮನನ್ನು ಸ್ತುತಿಸಿದ.

"ಸೋಮ ಪ್ರೇಮಿ ಇಂದ್ರನೆ ! ನಾನು ನಿರಾಶನಾಗಿದ್ದೇನೆ ಹೇ ಶಕ್ತಿಶಾಲಿ ಇಂದ್ರನೆ ! ನಿನ್ನ ಕೃಪೆ ನನ್ನ ಮೇಲೆ ಬೀಳಲಿ ನಮ್ಮ ಶತ್ರುಗಳು ನಿದ್ರಿತರಾಗಲಿ ಮಿತ್ರರು ಚಟುವಟಿಕೆಯಿಂದಿರಲಿ ಗಂಧರ್ವರಿಗೆ ಸಮಾನರಾದ ಈ ಶತ್ರುಗಳನ್ನು ನಾಶಮಾಡು ನಮ್ಮ ಬಗೆಗೆ ಕೆಟ್ಟದ್ದನ್ನು ಬಯಸುವವರನ್ನು ವಧಿಸು ಹೇ ಶತಕ್ರತು ! ನನ್ನ ಜನ್ಮ ಮರಣದ ಸಂಘರ್ಷವನ್ನು ನಿವಾರಿಸು. ಇದು ನಿನ್ನ ವಶವಾಗಲಿ ನಮ್ಮ ರಕ್ಷಣೆಗೆ ನಿನ್ನನ್ನು ಯಾವಾಗಲೂ ಆಹ್ವಾನಿಸುತ್ತೇನೆ ನನ್ನ ಪ್ರಾರ್ಥನೆ ನಿನಗೆ ಕೇಳಿದ್ದೇ ಆದರೆ ನೀನು ಪೂರ್ವ ಶಕ್ತಿಯುಳ್ಳವನಾಗಿ ಇಲ್ಲಿಗೆ ದಯಮಾಡಿಸು ಇಂದ್ರನೆ ! ಹಿಂದೆ

ನಿನ್ನನ್ನು ಆಹ್ವಾನಿಸಿದ್ದೆ ನಾನು ನನ್ನ ಪೂರ್ವಜರಂತೆ ಆಹ್ವಾನಿಸಿ ಸ್ಮರಿಸುತ್ತೇನೆ. ಇಂದ್ರನೆ ! ನೀನು ಮಿತ್ರರಿಗೆ ಮಿತ್ರ. ಅವರು ಯಾವಾಗಲೂ ನಿನ್ನನ್ನು ಸ್ಮರಿಸುತ್ತಾರೆ" ಎಂದು ಶುನಃಶೇಪನು ಇಂದ್ರನನ್ನು ಸ್ತೋತ್ರ ಮಾಡಿದ. ಕರಜೋಡಿಸಿ ವಂದಿಸಿದ ಅಗ್ನಿಯು ಸಹಸ್ರಯೂಪ ಬಂಧನದಿಂದ ಶುನಃ ಶೇಫನನ್ನು ಮುಕ್ತಗೊಳಿಸಿದ. ಅವನ ಪಾಶಗಳು ಬಿಚ್ಚಿಕೊಂಡವು ಇಂದ್ರನು ಪ್ರತ್ಯಕ್ಷನಾದ ಶುನಃಶೇಪನಿಗೆ ಸಂತೋಷ ವಾಯಿತು

"ಸೂಕ್ತದ್ರಷ್ಟನೆ ಈ ಸುವರ್ಣರಥ ನಿನಗಾಗಿಯೇ ಇದೆ" ಎಂದ ಇಂದ್ರ.

**ಆಧಾರ ಗ್ರಂಥ .**

**ಋಗ್ವೇದ** ೧-೨೪-೩೦, ೧-೩೦-೧೬, ೫-೨-೨೭, ೯-೩
**ಐತರೇಯ ಬ್ರಾಹ್ಮಣ** , ೭-೧೩-೧೮,
**ತೈತ್ತಿರೀಯ ಸಂಹಿತಾ** ೫-೨-೧೩
**ಮೈತ್ರಾಯಿಣಿ** ೩-೨೧,
**ಕಠಕ ಸಂಹಿತಾ** ೧೯-೧೧
**ಸಾವ್ಯಾಪಸನ ಶ್ರ[illegible]ತ್ರ** ೧೫-೨೦-೨೧' ೧೫-೧೮-೮, ೧೦-೧೧-೨
**ಬೃಹ ದ್ದೇವತಾ** [illegible]-೧೧೫, ೩-೧೦೩,

**ಟಿಪ್ಪಣಿ :** ಶುನಃಶೇಪನ ಕಥೆಯು ಸಂಕ್ಷಿಪ್ತ ಹಾಗೂ ಅಸ್ಪಷ್ಟವಾಗಿ ಋಗ್ವೇದ ದಲ್ಲಿ ಬಂದಿದೆ ಬ್ರಾಹ್ಮಣ, ಸಂಹಿತಾ, ಪುರಾಣ, ರಾಮಾಯಣ, ಮಹಾಭಾರತಗಳಲ್ಲಿ ಭಿನ್ನ ಭಿನ್ನ ಘಟನಗಳಿಂದ ವರ್ಣಿತವಾಗಿವ ನಾನು ನನ್ನ ರಾಮಾಯಣದ ಕಥೆಯಲ್ಲಿ ಇದನ್ನು ಕೊಟ್ಟಿದ್ದೇನ [illegible]ದರ ಅದಕ್ಕೂ ಇದಕ್ಕೂ ವ್ಯತ್ಯಾಸವಿದ ಇದಕ್ಕೆ ಆಧಾರ ಋಗ್ವೇದ ಎರಡನ್ನೂ ಹೋಲಿಸಿ ನೋಡಿದಾಗ ವಿಚಾರಗಳು ಕಥೆಗಳು ಹಾಗೂ ರಚನಾ ಶೈಲಿ ಇವುಗಳ ಕಾಲ ಗತಿಯನ್ನು ಅನುಸರಿಸಿರುವುದನ್ನು ಕಾಣಬಹುದು

**ಅಜೀಗರ್ತ** . ಶುನಃಶೇಪನ ತಂದೆಯ ಹೆಸರು ಅಂಗಿರಸನೆಂಬ ಹೆಸರೂ ಸಹ ಉಲ್ಲೇಖಿತವಾಗಿದೆ

**ಯೂಪ** ಯಜ್ಞದಲ್ಲಿ ಬಲಿಯನ್ನು ಕಟ್ಟುವ ಕಂಬ.

**ಶುನಃಶೇಪ** ಶಬ್ದಾರ್ಥವೆಂದರೆ ನಾಯಿಯ ಬಾಲ ಭೃಗು ಕುಲದಲ್ಲಿ ಹುಟ್ಟಿದ್ದ ಅಜೀಗರ್ತ ಋಷಿಯ ಎರಡನೇ ಮಗ. ಇವನ ಇನ್ನಿಬ್ಬರ ಸಹೋದರರ ಹೆಸರು ಶುನಃಪುಚ್ಛ, ಶುನೋಲಾಂಗೂಲ.



# ಕಕ್ಷೀವಾನ-ಸ್ವನಯ

ರಾಜ ಸ್ವನಯ ವಿಹಾರಕ್ಕಾಗಿ ಹೊರಟಿದ್ದ ಅವನು ಹೋಗುತ್ತಿದ್ದ ದಾರಿಯ ಪಕ್ಕದಲ್ಲಿ ಒಬ್ಬ ಸುಂದರ ಋಷಿಕುಮಾರ ನಿದ್ರಿಸುತ್ತಿದ್ದ ಅವನನ್ನು ನೋಡಿ ರಾಜ ನಿಂತ ಋಷಿ ತರುಣ, ದೀರ್ಘನಿದ್ರೆಯಲ್ಲಿದ್ದ ಮಾರ್ಗಾಯಾಸ ಕಳೆಯಲು ವಿಶ್ರಾಂತಿಗಾಗಿ ಮಲಗಿದ್ದ ದಾರಿಯ ಧೂಳು ಅವನ ಮೈ ಮೇಲೆ ತುಂಬಿತ್ತು ಒಬ್ಬನೇ ಆ ಕಾಡಿನಲ್ಲಿ ಬಹಳ ದೂರ ಬಂದಿದ್ದ ಮರಗಳ ತಂಪಾದ ನೆರಳಿನಲ್ಲಿ ವಿಶ್ರಮಿಸಿಕೊಳುತ್ತಾ ಹಾಗೆಯೇ ನಿದ್ರೆಹೋದ

ರಾಜನು ಅವನ ಸುದೃಢ ಸುಂದರ ಯುವಶರೀರವನ್ನು ನೋಡಿದ ಸಂತೋಷದಿಂದ ಒಂದೇ ಸಮನೆ ನೋಡುತ್ತಲೇ ಇದ್ದ ರಾಜನ ಅನುಚರರು ಅವನ ಹಿಂದೆ ನಿಂತರು. ಋಷಿಕುಮಾರನಿಗೆ ಕೋಲಾಹಲದಿಂದ ನಿದ್ರಾ ಭಂಗವಾಯಿತು ಎದ್ದು ಕುಳಿತ ಋಷಿಕುಮಾರನು ರಾಜನನ್ನು ನೋಡಿದ ಜನರ ಗುಂಪನ್ನು ಸುತ್ತಲೂ ನೋಡಿದ ಆಶ್ಚರ್ಯವಾಯಿತು ಆಕಾಶವನ್ನು ನೋಡಿ ಸಮಯವನ್ನು ತಿಳಿದ. ಬಹಳ ಸಮಯ ಮಲಗಿಬಿಟ್ಟೆ ಎಂದು ಆಶ್ಚರ್ಯಪಟ್ಟ

"ಋಷಿಕುಮಾರರೇ ! ತಾವು ಎಲ್ಲಿಂದ ಬರುತ್ತಿದ್ದೀರಿ" ಎಂದು ರಾಜ ಕೇಳಿದ.

"ರಾಜನೆ ! ವಿದ್ಯಾಭ್ಯಾಸ ಮುಗಿಸಿಕೊಂಡು ಗುರುಗಳ ಆಶ್ರಮದಿಂದ ಬರುತ್ತಿದ್ದೇನೆ" ಎಂದು ಹೇಳಿದ.

"ತಾವು ಎಲ್ಲಿಗೆ ಹೋಗಬೇಕು ?"

"ನಮ್ಮ ಮನೆಗೆ ಹೋಗಬೇಕು ! ಈ ತಂಪಾದ ಸ್ಥಳದಲ್ಲಿ ವಿಶ್ರಮಿಸಲು ನಿಂತೆ ನಿದ್ದೆ ಬಂದಿತು" ತನ್ನ ಕಣ್ಣುಗಳನ್ನು ಉಜ್ಜಿಕೊಳ್ಳುತ್ತಾ ಹೇಳಿದ

"ನನ್ನನ್ನು ಜನರು ಸ್ವನಯ ಭಾವಯವ್ಯನೆಂದು ಕರೆಯುತ್ತಾರೆ ನಾನು ಸಿಂಧು ತಟದ ಭೂಭಾಗಕ್ಕೆ ರಾಜ ! ಮೃದುವಾಗಿ ವಿನಂತಿಸಿದ

"ನನ್ನ ಹೆಸರು . ಸ್ವಲ್ಪ ನಿಧಾನಿಸಿ ನನ್ನನು ಉಶಿಜ ಪುತ್ರ ಕಕ್ಷಿವಾನ ಎಂದು ಕರೆಯುತ್ತಾರೆ. ನನ್ನ ತಂದೆ ದೀರ್ಘತಮಸ ನಾನು ಪ್ರಜವಂಶಿ ಕೆಲವರು ಕಕ್ಷೀವತ ಔಶಿಜನೆಂದೂ ಕರೆಯುತ್ತಾರೆ" ಎಂದ ಋಷಿಕುಮಾರ.

"ತಮ್ಮನ್ನು ನೋಡಿದ್ದು ಬಹಳ ಸಂತೋಷವಾಯಿತು" ಎಂದ ರಾಜ ರಾಜನ ಸಂಗಡ ಅವನ ಪರಿವಾರವಿತ್ತು ಪುರೋಹಿತರಿದ್ದರು ಪತ್ನಿ ಇದ್ದಳು ಸಪರಿವಾರವನ್ನು ನೋಡಿದ

"ಶ್ರೀಮಂತರೆ ! ಯಾವ ಯಾತ್ರೆಗಾಗಿ ಹೊರಟಿದ್ದೀರಿ" ?

"ನಾವು ಕ್ರೀಡೆಗಾಗಿ ಕಾಡಿಗೆ ಬಂದಿದ್ದೆವು ಆಕಸ್ಮಾತ್ತಾಗಿ ನಿಮ್ಮನ್ನು ನೋಡಿ ಪರಿಚಯ ಮಾಡಿಕೊಳ್ಳುವ ಆಸೆಯಾಯಿತು" ರಾಜನು ಋಷಿಕುಮಾರನ ರೂಪದಿಂದ ಆಕರ್ಷಿತನಾಗಿದ್ದ. ದೇವಸಮಾನನಾಗಿ ಕಾಣುತ್ತಿದ್ದ ಅವನ ಪರಿಚಯದಿಂದ ಸಂತೋಷಗೊಂಡಿದ್ದ ಮನಸ್ಸಿನಲ್ಲಿ ಒಂದು ನಿರ್ಧಾರಕ್ಕೆ ಬಂದಿದ್ದ.

"ಋಷಿಗಳೆ ! ತಾವು ಮಂತ್ರದ್ರಷ್ಟಾರರು, ಸಂಪನ್ನರು ಮನೆಕಡೆ ಹೊರಟಿದ್ದೀರಿ. ತಾವು ಗೃಹಸ್ಥಾಶ್ರಮಿಗಳಾಗಲು ಅಪೇಕ್ಷಿಸುತ್ತೀರೇನು ?"

ರಾಜನ ಮಾತುಗಳು ಋಷಿಕುಮಾರನಿಗೆ ಅರ್ಥವಾಗಲಿಲ್ಲ

"ನಾವು ಸಮಾನ ಗೋತ್ರೀಯರು ಪರಸ್ಪರ ವರ್ಣಗಳ ವಿರೋಧವೂ ಇಲ್ಲ" ಎಂದ ರಾಜ

ಋಷಿಕುಮಾರನ ದೃಷ್ಟಿ ಸುಂದರ ರಾಜಕನ್ಯೆಯರ ಮೇಲೆ ಬಿತ್ತು ಅವರು ಸುಂದರನೂ ದೃಢಕಾಯನೂ ಆಗಿರುವ ಋಷಿಕುಮಾರನನ್ನು ನೋಡಿ ಸಂತಸ ಗೊಂಡರು ರಾಣಿಯು ಋಷಿಕುಮಾರನನ್ನು ಅಳಿಯನ ದೃಷ್ಟಿಯಲ್ಲಿ ನೋಡು ತ್ತಿದ್ದಳು ರಾಜ ತನ್ನ ರಾಣಿಯನ್ನು ನೋಡಿದ ಅವಳು ನಸುನಕ್ಕಳು ಅವರು ನೇತ್ರ ಗಳಿಂದಲೇ ವಿಚಾರ ವಿನಿಮಯ ಮಾಡಿಕೊಂಡರು

"ಋಷಿಗಳೇ ! ತಮ್ಮ ವಂಶದ ವಿಶೇಷ ಪರಿಚಯವನ್ನು ಬಯಸಬಹುದೆ"

"ರಾಜನೆ ! ನಾನು ಅಂಗಿರಸ ವಂಶದವನು. ದಿರ್ಘತಮಸನ ಮಗ" ಎಂದು ತನ್ನನ್ನು ಪರಿಚಯಿಸಿಕೊಂಡ.

ರಾಣಿಗೆ ಸಂತೋಷವಾಯಿತು ತನ್ನ ಮಕ್ಕಳನ್ನು ನೋಡಿದಳು

"ಋಷಿಕುಮಾರರೇ ! ನಮ್ಮ ನಿಮ್ಮ ಗೋತ್ರವರ್ಣಗಳಲ್ಲಿ ವಿರೋಧವಿಲ್ಲ ನಾವು ಪರಸ್ಪರ ಸಂಬಂಧವನ್ನು ಬೆಳಸಬಹುದು"

"ಸಂಬಂಧ" ಕಕ್ಷೀವಾನನಿಗೆ ಆಶ್ಚರ್ಯವಾಯಿತು

"ನಿಜ" ರಾಜನಗುತ್ತಾ ಹೇಳಿದ

"ವಿಚಿತ್ರವಾಗಿದೆ ನಿಮ್ಮಮಾತು" ಋಷಿಕುಮಾರ ಗಂಭೀರವಾಗಿ ಹೇಳಿದ

"ನಿಜ ಕಕ್ಷೀವತ್, ಇವರು ನನ್ನ ಹತ್ತು ಜನ ಕುಮಾರಿಯರು ರಾಜನು ತನ್ನ ಸುಂದರ ಕುಮಾರಿಯರನ್ನು ನೋಡಿದ

ಕಕ್ಷೀವಾನನ ದೃಷ್ಟಿ ಅವರ ಮೇಲೆ ಬಿತ್ತು ಅವರಿಗೆ ನಾಚಿಕೆಯಾಯಿತು ಸ್ತ್ರೀ ಸಹಜ ನಾಚಿಕೆಯಿಂದ ಬಾಗಿದರು

ವೇದ ವೇದಾಂಗಗಳನ್ನು ಅಧ್ಯಯನ ಮಾಡಿದ್ದರೂ ಈಗ ಯಾವುವೂ ಸಹಾ ಯಕ್ಕೆ ಬರಲಿಲ್ಲ. ಶರೀರದ ಶಕ್ತಿ ಯೌವನದಿಂದ ಅವರಲ್ಲಿ ಆಕರ್ಷಿತನಾದ. ಯಾರಿಗೂ ಕಾಣದಂತೆ ಆ ಕನ್ಯೆಯನ್ನು ನೋಡುತ್ತಿದ್ದ ಅವನು ವಿವೇಚನೆಯನ್ನು ಕಳೆದುಕೊಂಡ. ಇದು ಅವನಿಗೆ ಗೌರವ ಪ್ರದವಾದುದಾಗಿರಲಿಲ್ಲ ಇಂಥಹ ಪರಿಸ್ಥಿತಿ

ಅವನಿಗೆ ಯಾವಾಗಲೂ ಬಂದಿರಲಿಲ್ಲ. ಅವನ ಮೃದುವಾದ ಮುಖ ಭಾವವನ್ನು ರಾಜ ನೋಡಿದ.

"ಅಪೇಕ್ಷೆ ಇದ್ದರೆ ಹೇಳಿ" ಎಂದ ರಾಜ.

ಕಕ್ಷೀವಾನನು ಹೌದು ಅಥವಾ ಇಲ್ಲ ಎಂದು ಹೇಳಲಾರದೇ ಹೋದ ಅವನು ತನ್ನ ವರ್ತನೆಗೆ ನಾಚಿ ದೃಷ್ಟಿಯನ್ನು ಬೇರೆಡೆಗೆ ತಿರುಗಿಸಿದ.

ರಾಜ ಸ್ವನಯನು ಸಾಲಂಕೃತ ಹತ್ತು ಕನ್ಯೆಯರನ್ನು ಕನ್ಯಾದಾನ ಮಾಡಿಕೊಟ್ಟ. ಕಕ್ಷೀವಾನನು ಗೃಹಸ್ಥನಾದ. ಅವನ ಒಂದು ಅಧ್ಯಾಯ ಮುಗಿದು ಮತ್ತೊಂದು ಪ್ರಾರಂಭವಾಯಿತು.

ರಾಜ ಕುಮಾರಿಯರಿಗೆ ಹತ್ತು ರಥಗಳನ್ನು ಕೊಟ್ಟ ಆ ರಥಗಳಿಗೆ ಬಲಿಷ್ಠ ಹಾಗೂ ಸುಂದರವಾದ ಕುದುರೆ, ಧನ, ಪಾತ್ರೆಗಳು, ಕುರಿ ಮತ್ತು ಮೇಕೆಗಳನ್ನು ಉಡುಗೊರೆಯಾಗಿ ಕೊಟ್ಟ ಇದರ ಜೊತೆಗೆ ಒಂದು ನಿಷ್ಕ ನಾಣ್ಯಗಳನ್ನು ಕೊಟ್ಟ ೧೦೦೦೮ ಹಸುಗಳನ್ನು ಬಳುವಳಿಯಾಗಿ ನೀಡಿದ ಕಕ್ಷೀವಾನನು ಹಣ ಮತ್ತು ತನ್ನ ಹತ್ತು ಜನ ಪತ್ನಿಯರೊಂದಿಗೆ ರಥದಲ್ಲಿ ತಂದೆಯ ಮನೆಗೆ ಹೊರಟ. ರಾಜನನ್ನು ಸ್ತುತಿಸಿದ.

ತಂದೆಯ ಮನೆಗೆ ಪತ್ನಿಯರೊಡಗೂಡಿ ಹೋಗುತ್ತಿದ್ದ. ಸಹಸ್ರ ಗೋವುಗಳು ಅವನನ್ನು ಹಿಂಬಾಲಿಸುತ್ತಿದ್ದವು ಅವುಗಳ ಮುಂದೆ ರಥಗಳು ಹೋಗುತ್ತಿದ್ದವು ಕುದುರೆಗಳನ್ನು ಸುವರ್ಣಾಭರಣಗಳಿಂದ ಅಲಂಕರಿಸಲಾಗಿತ್ತು

ಅವನು ತನ್ನ ತಂದೆಯ ಆಶ್ರಮವನ್ನು ತಲುಪಿದ

ಪ್ರಜಾವಂಶಿಗಳು ಅವನನ್ನು ನೋಡಿ ಹರ್ಷಿತರಾದರು ಮಡುಗರು ಆಶ್ಚರ್ಯ ದಿಂದ ಕುದುರೆಗಳನ್ನು ಕಟ್ಟುತ್ತಿದ್ದರು ಅವರಿಗೆ ಮೂರು ರಥ ಮತ್ತು ಉತ್ತಮ ವಾದ ಹಸುಗಳನ್ನು ನೀಡಿದ ಶ್ರದ್ಧೆಯಿಂದ ಸೂಕ್ತಿಗಳನ್ನು ಪಠಿಸಿದ ದಾನಿಯು ಸೂರ್ಯೋದಯದಲ್ಲಿ ದಾನ ಮಾಡುತ್ತಾನೆ ವಿದ್ವಾಂಸರು ಅವನ್ನು ಸ್ವೀಕರಿಸುತ್ತಾರೆ ಆ ಧನದಿಂದ ಸಂತಾನ ಆಯುರ್ಬಲಗಳ ರಕ್ಷಣೆಯಾಗುತ್ತದೆ ಅದರಿಂದ ಅಸಂಖ್ಯ ಕುದುರೆಗಳು, ಹಸುಗಳು, ಸುವರ್ಣರಾಶಿಗಳು ಸಿಕ್ಕುತ್ತವೆ ದಾನಿಗಳು ಇಂದ್ರನ ಕೃಪೆಗೆ ಪಾತ್ರರಾಗುತ್ತಾರೆ. ಅವರಿಗೆ ಶಕ್ತಿಕೊಡುತ್ತಾನೆ ಪ್ರಾತಃ ಕಾಲದಲ್ಲಿ ಐಶ್ವರ್ಯವನ್ನು ಅನುಗ್ರಹಿಸುತ್ತಾನೆ ಶುಭಯಜ್ಞಕರ್ಮವನ್ನು ನೋಡಲು ರಥಾರೂಢನಾಗಿ ಬಂದಿದ್ದೇನೆ"

ಯಜಮಾನರೇ ! ಸೋಮವನ್ನು ಉತ್ಪಾದಿಸಿ ಇಂದ್ರನಿಗೆ ಕೊಡಿ. ಅದನನ್ನು ಸ್ತೋತ್ರಮಾಡಿರಿ ಗೋಸದೃಶವಾದ ಸರಿತ್ತುಗಳು ಯಜ್ಞೇಚ್ಛು ಯಜಮಾನನ ಸಮೀಪಕ್ಕೆ ಹರಿದು ಬರುತ್ತವೆ ಯಜ್ಞೇಚ್ಛುವಿಗೆ ಎಲ್ಲಾ ಕಡೆಯಿಂದ ತುಪ್ಪದ ಹೊಳೆ ಹರಿದು ಬರುತ್ತದೆ ದಾನಿಯನ್ನು ಸ್ವರ್ಗದಲ್ಲಿ ಸತ್ಕರಿಸುತ್ತಾರೆ. ದೇವತೆಗಳ ಸಮೂಹ ದಲ್ಲಿ ಅವನನ್ನು ಸೇರಿಸುತ್ತಾರೆ. ಅವನು ದೀರ್ಘಾಯುಷಿಯಾಗುತ್ತಾನೆ. ದಾನಿಯು

ಯಾವಾಗಲೂ ಸುಖಿಯಾಗಿರುತ್ತಾನೆ. ಪಾಪದಿಂದ ಮುಕ್ತನಾಗುತ್ತಾನೆ.

ಕಾಲ ಕಳೆಯುತ್ತಿತ್ತು ರಾಜಸ್ವನಯನ ಇಚ್ಛೆಯಂತೆ ಒಂದು ನೂರು ಯಜ್ಞ ಮಾಡಿದ ಉಶಿಜನಾದ ಕಕ್ಷೀವಾನನು ತನ್ನ ವಿದ್ಯೆ ಹಾಗೂ ಕಾರ್ಯಗಳಿಂದ ಕೀರ್ತಿಯನ್ನು ಸಂಪಾದಿಸಿದ ಬೇರೆಯವರಿಗೆ ಆದರ್ಶಪ್ರಾಯನಾದ. ಅಶ್ವಿನೀಕುಮಾರರು ಯಾವಾಗಲೂ ಇವನ ಸೇವೆಗೆ ಸಿದ್ಧರಿರುತ್ತಿದ್ದರು.

ಕಕ್ಷೀವಾನನ ಬುದ್ಧಿ ಉತ್ತರೋತ್ತರ ವೃದ್ಧಿಯಾಯಿತು. ಅವನು ಋಷಿ ಹಾಗೂ ಮಂತ್ರದ್ರಷ್ಟಾರರಿಂದ ಗೌರವಿಸಲ್ಪಟ್ಟ ಅವನು ದೇವತೆಗಳಿಗೆ ಸೋಮರಸವನ್ನು ಕೊಟ್ಟ ಅದಕ್ಕೆ ಬದಲಾಗಿ ಅವರು ಪಶು ಧನವನ್ನು ಅನುಗ್ರಹಿಸಿದರು. ಹರ್ಷದಾಯಕ ಸೋಮದಾನದಿಂದ ಅವನು ಕುಶಾಗ್ರಮತಿಯಾಗತೊಡಗಿದ. ಅಶ್ವಿನೀಕುಮಾರರನ್ನು ಆಗಾಗ್ಗೆ ಆಹ್ವಾನಿಸುತ್ತಿದ್ದ ಅವರ ದಯೆಯಿಂದ ಶತಾಯುಷಿಯಾದ.

ಆಧಾರ ಗ್ರಂಥ :

ಋಗ್ವೇದ ೧-೧೮-೧, ೧-೧೨೫, ೧-೧೧೭-೬, ೧-೫೧-೧೩, ೧-೧೨೬-೨-೪, ೧-೧೨೦, ೧-೧೧೨-೧೧, ೪-೨೬-೧, ೮-೯-೧೦
೧-೧೧೬-೭, ೯-೭೪-೮, ೧೦-೨೫-೧೦, ೧೦-೬೧-೧೬.

ಐತರೇಯ ಬ್ರಾಹ್ಮಣ ೧-೨೧.

ಜೈಮಿನೀ ಬ್ರಾಹ್ಮಣ ೧-೬-೧೧, ೧೬-೪-೫

ಶಾಂಖಾಯನ ಶ್ರೌತಸೂತ್ರ ೧೬-೧೧-೫.

ಬೃಹದ್ದೇವತ ೩-೧೪೨-೧೫೯

ಟಿಪ್ಪಣಿ ಈ ಕಥೆಯಲ್ಲಿ ವೈದಿಕ ವಿವಾಹ ಪದ್ಧತಿಯನ್ನು ಕಾಣಬಹುದು. ತಂದೆಯು ತನ್ನ ಕನ್ಯೆಯರ ವಿವಾಹಕ್ಕೆ ಅಧಿಕಾರಿಯಾಗುತ್ತಿದ್ದ ಬಹು ಪತ್ನೀ ಪದ್ಧತಿಯು ಜಾರಿಯಲ್ಲಿತ್ತು ವಿವಾಹದಲ್ಲಿ ಹಣಕ್ಕಿಂತ ಗುಣಕ್ಕೆ ಪ್ರಾಧಾನ್ಯವಿತ್ತು. ಗುಣವಂತನೊಡನೆ ವಿವಾಹವು ಶ್ರೇಷ್ಠವೆಂದು ತಿಳಿದಿದ್ದರು

ಕಕ್ಷೀವತ . ಇವನು ಪ್ರಜವಂಶದವನು. ಔಶಿಜನೆಂದೂ ಕರೆಯುತ್ತಾರೆ. ಇವನ ವಂಶಜರನ್ನು ಪ್ರಜನೆಂದೂ ಕರೆಯುತ್ತಾರೆ. ಸಿಂಧು ದೇಶದ ರಾಜ ಸ್ವನಯನು ಬಹಳ ದಾನ ಮಾಡಿದ್ದರಿಂದ ಅವನನ್ನು ಬಹಳ ಹೊಗಳಿದ್ದಾನೆ. ವೃದ್ಧಾವಸ್ಥೆಯಲ್ಲಿ ಕುಮಾರಿ ವೃಚಳೊಡನೆ ವಿವಾಹವಾಯಿತು. ನೂರು ವರ್ಷ ಬದುಕಿದ್ದ. ಇವನೊಬ್ಬ ಆಚಾರ್ಯನೂ ವೈದಿಕ ಋಷಿಯೂ ಆಗಿದ್ದ. ಇವನನ್ನು ಕ್ಷತ್ರಿಯನೆಂದು ಕೆಲವರು ಹೇಳುತ್ತಾರೆ. ದೀರ್ಘತಮಸನ ಮಗ ತಾಯಿ ಉಶಿಜಾ ಇವನು ಬ್ರಾಹ್ಮಣ್ಯವನ್ನು ಪಡೆದಿದ್ದ ಋಗ್ವೇದದ ಕಾಲದಲ್ಲಿಯೂ ಒಬ್ಬ ಪ್ರಾಚೀನ ವ್ಯಕ್ತಿ ಎಂದು ಗುರುತಿಸಲಾಗಿದೆ. ಇವನ ಮಗಳ ಹೆಸರು ಘೋಷಾ, ಇವನು ಸೂಕ್ತ ದ್ರಷ್ಟಾರನಾಗಿದ್ದ.

ಇವನನ್ನು ಕಕ್ಷೀವತ, ಔಶಿಜ ಅಥವಾ ಕಕ್ಷೀವಾನ್ ಎಂದು ಕರೆಯುತ್ತಿದ್ದರು. ರಸ ಕುಲದ ಮಂತ್ರಕಾರನೂ ಆಗಿದ್ದ.

**ಭಾವಯವ್ಯ .** ಭಾವ್ಯನೆಂದೂ ಕರೆಯುತ್ತಾರೆ. ಇವನು ಸ್ವನಯ ರಾಜನ ತಂದೆ.

**ಸ್ವನಯ ·** ಕಕ್ಷೀವತನಿಗೆ ಆಶ್ರಯದಾತ. ಸಿಂಧುತಟ ನಿವಾಸಿಯಾದ ಒಬ್ಬ ರಾಜ, ಇವನನ್ನು ಸ್ವನಯ ಭಾವ್ಯನೆಂದೂ ಕರೆಯುತ್ತಾರೆ.



# ನಮುಚಿ

ಯಜ್ಞಶಾಲೆಯಲ್ಲಿ ಗದ್ದಲ ಉಂಟಾಯಿತು. ಋಷಿಗಳು ಭಯ ಗ್ರಸ್ತರಾದರು. ರಾಕ್ಷಸ ನಮುಚಿ ಎಲ್ಲರ ಎದುರಿನಲ್ಲೇ ಯಜ್ಞವನ್ನು ಧ್ವಂಸಮಾಡಿದ.

ಮಾಯಾವೀ ನಮುಚಿಯ ಸಂಹಾರಕ್ಕಾಗಿ ಋಷಿಗಳು ಇಂದ್ರನನ್ನು ಪ್ರಾರ್ಥಿಸಿದರು ದಾಸ ನಮುಚಿಯ ಮಾಯೆಯಿಂದ ಮಾನವರು ವ್ಯಥಿಥರಾದರು ಮಾನವರು ದೇವತೆಗಳಾಗುವ ಮಾರ್ಗ ಕೆಟ್ಟಿತು ಯಜ್ಞಯಾಗಾದಿಗಳನ್ನು ಮಾಡುವುದು ಕಷ್ಟವಾಯಿತು. ಮನುವಿನ ಪ್ರಾರ್ಥನೆ ಇಂದ್ರನಿಗೆ ಮುಟ್ಟಿತು ಋಷಿ ಮತ್ತು ಮನುವಿನ ಪ್ರಾರ್ಥನೆಯಂತೆ ವಜ್ರಾಯುಧದಿಂದ ನಮುಚಿಯ ಸಂಹಾರಕ್ಕಾಗಿ ಸನ್ನದ್ಧನಾದ ಇಂದ್ರ.

ರಣರಂಗದಲ್ಲಿ ಶತ್ರುಗಳೊಡನೆ ಹೋರಾಡುವುದು ಸುಲಭ. ಆದರೆ ಮಾಯಾವೀರಾಕ್ಷಸರೊಡನೆ ಯುದ್ಧ ಮಾಡುವುದು ಕಠಿನವಾದ ಕೆಲಸ. ಪರಾಕ್ರಮಿ ಇಂದ್ರ ತನ್ನ ಪರಾಕ್ರಮವನ್ನು ಪ್ರಯೋಗಿಸಿದ. ದಾಸ ನಮುಚಿಯ ಮಾಯಾ ಶಕ್ತಿಯನ್ನು ನಾಶಮಾಡಿದ ಇದರಿಂದ ರಾಕ್ಷಸನ ಒಂದು ಶಕ್ತಿ ನಾಶವಾಯಿತು.

ನಮುಚಿಯ ಮಾಯಾಶಕ್ತಿ ನಾಶವಾದರೂ ಅವನ ಶಕ್ತಿ ನಾಶವಾಗಲಿಲ್ಲ. ಇಂದ್ರನಿಗೆ ಹೆದರಿ ಬಹಳ ದೂರದೇಶಕ್ಕೆ ಹೋದ. ಇಂದ್ರನೂ ಸಹ ಅವನ ಬೆನ್ನು ಹತ್ತಿ ಅವನನ್ನು ಹಿಡಿದ ಅವನನ್ನು ಸೋಲಿಸುವುದು ಸುಲಭವಾಗಿರಲಿಲ್ಲ. ರಣರಂಗದಲ್ಲಿ ಇಂದ್ರ ನಮುಚಿ ಯುದ್ಧಕ್ಕೆ ಸಿದ್ಧರಾದರು ನಮುಚಿಯ ಶಕ್ತಿಯನ್ನು ನೋಡಿ ಅಶ್ವಿನೀ ಕುಮಾರರು ಇಂದ್ರನ ಸಹಾಯಕ್ಕೆ ಬಂದರು. ಮರುದ್ದೇವತೆಗಳೆಲ್ಲರೂ ಈ ಯುದ್ಧವನ್ನು ನೋಡಲು ಬಂದರು. ಮಾಯಾವೀ ನಮುಚಿ ಸ್ತ್ರೀಯರನ್ನು ಯುದ್ಧ ಸಾಧನವನ್ನಾಗಿ ಮಾಡಿಕೊಂಡ ಸ್ತ್ರೀಯರ ಯೌವನ ಸೌಂದರ್ಯವನ್ನು ನೋಡಿ ಇಂದ್ರ ವಶವಾಗುತ್ತಾನೆ ಎಂದು ನಮುಚಿ ತಿಳಿದ. ಅವನ ಯೋಜನೆ ತಲ

ಕೆಳಗಾಯಿತು. ರಾಕ್ಷಸನ ವಧೆಗಾಗಿ ಇಂದ್ರ ಸಜ್ಜಾಗಿ ನಿಂತಿದ್ದ. ಅವನು ರಣ ರಂಗಕ್ಕೆ ಬಂದ. ನಮುಚಿಯು ಸುಂದರ ಸ್ತ್ರೀಯರನ್ನು ಹೆದರಿಸಿ ಇಂದ್ರನಲ್ಲಿಗೆ ಕಳು ಹಿಸಿದ ಆದರಿಂದ ಇಂದ್ರ ವಿಚಲಿತನಾಗಲಿಲ್ಲ ಅವರು ಇಂದ್ರನನ್ನು ಏನು ಮಾಡಲೂ ಸಾಧ್ಯವಾಗಲಿಲ್ಲ. ಯುದ್ಧಕ್ಕೆ ಸಿದ್ಧನಾಗಿಯೇ ಇದ್ದ.

ಇಂದ್ರ ವಜ್ರಾಯುಧ ಹಿಡಿದು ನಮುಚಿಯ ಸೇನೆ ಕಡೆ ನುಗ್ಗಿದ. ಅವನಿಗೆ ಸಹಾಯಕರಾಗಿ ಅಶ್ವಿನೀಕುಮಾರರಿದ್ದರು. ಅಶ್ವಿನೀಕುಮಾರರು ಪುಷ್ಟಿಕರವಾದ ಸೋಮಪಾನ ಮಾಡಿಸಿದರು. ಸೋಮವನ್ನು ಕುಡಿಯುತ್ತಲೇ ಅವನಿಗೆ ಅಸಮಾನ ಶಕ್ತಿ ಬಂದಂತಾಯಿತು. ಅವನ ರೂಪ ಉಗ್ರವಾಯಿತು. ರುದ್ರನಂತೆ ನಮುಚಿಯ ಸೈನ್ಯದ ಮೇಲೆ ಇಂದ್ರ ಎರಗಿದ. ಇಂದ್ರನು ಭಯಂಕರವಾಗಿ ಘರ್ಜಿಸಿದ ಆ ಘರ್ಜನೆ ಮೇಘ ಘರ್ಜನೆಗಿಂತಲೂ ಭಯಂಕರವಾಗಿತ್ತು. ಅಸುರರನ್ನು ಕೊಲ್ಲಲು ಯುದ್ಧೋ ನ್ಮತ್ತನಾದ ಅವನ ಸಂಹಾರದ ವೈಖರಿಯನ್ನು ಜಗತ್ತು ನೋಡಿತು. ಮರುದ್ಗಣ ಗಳ ಪ್ರಭಾವದಿಂದ ಆಕಾಶ ಮತ್ತು ಭೂಮಿ ಚಕ್ರದಂತೆ ತಿರುಗಿದವು. ಅಸುರ ಸೈನ್ಯ ಸೋತಿತು ಶತ್ರುಗಳ ಸಂಹಾರವಾಗಿತ್ತು ಆದರೂ ನಮುಚಿ ತಪ್ಪಿಸಿಕೊಂಡ. ನಮುಚಿಯು ಯುದ್ಧ ರಂಗದಿಂದ ಓಡಿ ಹೋಗಿದ್ದ ಇಂದ್ರ ರಾಕ್ಷಸರ ೯೯ ನಗರ ಗಳನ್ನು ನಾಶ ಮಾಡಿದ್ದ

ನಮುಚಿ ಪಲಾಯನ ಮಾಡಿದ್ದರೂ ಜೀವ ಉಳಿಸಿಕೊಳ್ಳಲು ಅಸಮರ್ಥನಾದ. ಇಂದ್ರನು ಅತಿವೇಗದಿಂದ ನಮುಚಿಯನ್ನು ಸಮೀಪಿಸಿದ ತನ್ನ ಶತ್ರುವನ್ನು ತನ್ನ ಎದುರಿಗೇ ನೋಡಿದ ಆ ಕ್ಷಣವೆ ಇಂದ್ರನ ಸ್ವರೂಪ ಪ್ರಖರವಾದ ಅಗ್ನಿ ಜ್ವಾಲೆ ಯಂತಾಯಿತು ಇಂದ್ರನು ನಮುಚಿಯನ್ನು ಹಿಡಿದ. ಪ್ರಾಣಗಳ ರಕ್ಷಣೆಗಾಗಿ ಜಲದ ನೊರೆಯಿಂದ ಅವನ ಶಿರಸ್ಸನ್ನು ಮುರಿದು ನುಚ್ಚು ನೂರು ಮಾಡಿದ. ಇವನ ಪರಾ ಕ್ರಮವನ್ನು ನೋಡಿ ಶ್ಯೇನ ಪಕ್ಷಿಯು ಸೋಮರಸವನ್ನು ತಂದು ಕೊಟ್ಟಿತು. ಮುನಿ ಗಳ ಕ್ಷೇಮಕ್ಕಾಗಿ ನಮುಚಿಯನ್ನು ಇಂದ್ರನು ಸಂಹರಿಸಿದ. ಇದರಿಂದ ಮನುವಿಗೆ ದೇವತೆಗಳೊಡನೆ ಸಂಪರ್ಕ ಮಾರ್ಗವು ಸುಲಭವಾಯಿತು. ಋಷಿಗಳಿಗೆ ಅಸುರರ ಆತಂಕವು ದೂರವಾಯಿತು, ದೇವತೆಗಳು ಯಜ್ಞಗಳಿಂದ ತಮ್ಮ ತಮ್ಮ ಭಾಗ ಗಳನ್ನು ಪಡೆಯುತ್ತಿದ್ದರು.

**ಆಧಾರ ಗ್ರಂಥ**

**ಋಗ್ವೇದ** ೧-೫೩-೭, ೨-೧೪-೫, ೫-೩೦-೭, ೬-೨೦, ೭-೧೯-೫, ೮-೨೪-೧೩, ೧೦-೭೩-೭, ೧೦-೧೩-೪

**ಶತಪಥ ಬ್ರಾಹ್ಮಣ :** ೫-೪-೧-೯, ೧೨-೭-೩-೪, ೧೨-೭-೩-೧-೩, ೧೨-೭-೧-೧೦.

**ವಾಜಸನೇಯ ಸಂಹಿತಾ :** ೧೦-೧೪ ೧೯-೩೪, ೨೦-೫೯

**ತೈತ್ತಿರೀಯ ಬ್ರಾಹ್ಮಣ** ೧-೭-೧-೯-೭.

**ಟಿಪ್ಪಣಿ :** ಈ ಕಥೆ ಶತಪಥ ಬ್ರಾಹ್ಮಣದಲ್ಲಿ ಬೇರೆ ರೂಪದಲ್ಲಿ ಬಂದಿದೆ ಕಾಲಾಂತರದಲ್ಲಿ ಈ ಕಥೆ ನರಸಿಂಹಾವತಾರ ಕಲ್ಪನೆಗೆ ಆಧಾರವಾಗಿರಬಹುದು ಪುರಾಣ ಗಳಲ್ಲಿ ಶಸ್ತ್ರ, ಅಸ್ತ್ರ, ಆಕಾಶ, ಭೂಮಿಯಲ್ಲಿ ಯಾರೂ ಕೊಲ್ಲಬಾರದೆಂದು ಹಿರಣ್ಯ ಕಶಪುವು ವರ ಪಡೆದಿದ್ದ ಆದಕಾರಣ ನರಸಿಂಹಾವತಾರ ಮಾಡಿ ಹೊಸಲಿನ ಮೇಲೆ ಇಟ್ಟು ಉಗುರುಗಳಿಂದ ಕೊಂದ ವಿಷ್ಣು ನಮುಚಿಯನ್ನು ನೀರಿನ ನೊರೆಯಿಂದ ಶರೀರ ವನ್ನು ತಿರುಗಿಸಿ ಕೊಂದ. ಇಲ್ಲಿಯೂ ಸಹ ಆಯುಧವನ್ನು ಉಪಯೋಗಿಸಲಿಲ್ಲ.

**ನಮುಚಿ :** ಇಂದ್ರನ ಶತ್ರು. ಒಬ್ಬ ರಾಕ್ಷಸ. ಋಗ್ವೇದದಲ್ಲಿ ಇವನಿಗೆ ರಾಕ್ಷಸನೆಂದು ಹೇಳಿದೆ. ಇವನನ್ನು ದಾಸ ಮತ್ತು ಮಾಯಾ ಎಂದು ಕರೆಯಲಾಗಿದೆ. ಇಂದ್ರನು ಇವನ ೧೦೦ ಕೋಟೆಗಳನ್ನು ಹಾಳು ಮಾಡಿದ.

**ಮನು ·** ಮಾನವರಲ್ಲಿ ಮೊದಲಿಗ. ಮಾನವ ವರ್ಗಕ್ಕೆ ಜನ್ಮದಾತ. ವಿವಸ್ವಾನನಿಂದ ಶರಣ್ಯೂ ಛಾಯೆಯಲ್ಲಿ ಹುಟ್ಟಿದ್ದ ಪ್ರಥಮವಾಗಿ ಯಜ್ಞ ಮಾಡಿದವ ವಿವಸ್ವಾನನ ಮಗನಾದುದರಿಂದ ಇವನನ್ನು ವಿವಸ್ವತನೆಂದು ಕರೆಯು ತ್ತಾರೆ

**ಮರುತ :** ಮರುತ್ತುಗಳ ತಾಯಿ ವೃಶ್ನಿ. ಅವನು ವಾಯುವಿಗೆ ದೇವತೆ. ಇವರು ೨೧ ಹಾಗೂ ೧೮೦ ಎಂದು ಹೇಳುತ್ತಾರೆ ವೇದದ ಕೆಲವು ಭಾಗಗಳಲ್ಲಿ ಏಳು ಜನಗಳ ಸಮೂಹವೆಂದು ಹೇಳಿದೆ ಇವರು ಇಂದ್ರನ ಪುತ್ರರೆಂದು ಹೇಳಿದೆ. ರುದ್ರನ ಮಕ್ಕಳೆಂದೂ ಕರೆದಿದ್ದಾರೆ ರುದ್ರನ ಮಕ್ಕಳಾದುದರಿಂದ ರುದ್ರೀಯ ಗಣ ಎಂದು ಕರೆಯುತ್ತಾರೆ ವೃಶ್ನಿಯ ಮಕ್ಕಳಾದುದರಿಂದ ವೃಶ್ನಿ ಮಾತರ ಎಂದೂ ಹೇಳುತ್ತಾರೆ. ಇವರಿಗೆ ಗೋಮಾತಾರರು ಎಂದು ಮತ್ತೊಂದು ಹೆಸರು ವೇದದಲ್ಲಿ ಒಂದು ಕಥೆ ಇದೆ ಅಗ್ನಿಯು ಇವರನ್ನು ಹುಟ್ಟಿಸಿದ. ವಾಯುವು ಇವರನ್ನು ಆಕಾಶ ಗರ್ಭದಲ್ಲಿ ಅವಕಾಶ ಮಾಡಿ ಕೊಟ್ಟ. ಆದ್ದರಿಂದ ಇವರನ್ನು ಆಕಾಶ ಪುತ್ರರು, ಸಮುರ ಪುತ್ರರು, ಈ ರೀತಿಯಾಗಿ ಹೆಸರನ್ನು ಕೊಟ್ಟಿದ್ದಾರೆ. ಮರುತ್ತುಗಳು ಪರಸ್ಪರ ಸಹೋದರರು.



## ದೀರ್ಘತಮ

---

"ಮಮತಾ" ಬೃಹಸ್ಪತಿಯು ಭೃಗುವಂಶೀಯಳಾದ ತನ್ನ ಅಣ್ಣ ಉಚ್ಚಥನ ಪತ್ನಿಯನ್ನು ಕಾಮಾಸಕ್ತಿಯಿಂದ ನೋಡಿ ಕೂಗಿದ.

"ಬೃಹಸ್ಪತಿ! ಏನು ಆಜ್ಞೆ" ಎಂದು ಮಮತೆ ಉದಾಸೀನದಿಂದ ಕೇಳಿದಳು.

"ಮಮತ !" ಬೃಹಸ್ಪತಿ ಸ್ವಲ್ಪನಾಚಿದ ಅವಳನ್ನು ಸಮೀಪಿಸುತ್ತಾ ಹಾಗೆಯೇ ನಿಂತ.

'ದೇವ !' ಬೃಹಸ್ಪತಿಯ ವ್ಯವಹಾರದಿಂದ ಅವಳಿಗೆ ಆಶ್ಚರ್ಯವಾಯಿತು.

'ಅತ್ತಿಗೆ !' ಅವನ ಮುಖ ಕೆಂಪಾಯಿತು.

'ಮೈದುನ !' ಮಮತೆ ಹೆದರಿದಳು

'ಪ್ರಿಯೆ !' ಬೃಹಸ್ಪತಿಯ ಕಣ್ಣಿನಲ್ಲಿ ಕಾಮದ ಕಿಡಿಗಳು ಹೊಳೆಯುತ್ತಿದವು.

'ಏನಿದು' ಎಂದು ಹಿಂದೆ ಸರಿದಳು

ಮಮತಾ ಸುಂದರಿ, ಯುವತಿ, ಸಹಜ ಮಧುರ ಭಾಷಿಣಿ ಆಕರ್ಷಕವಾಗಿದ್ದಳು ಹೊಂಬಣ್ಣ ರತಿಸಮಾನವಾದ ಕಾಮಕ್ಕೆ ಸಹಕಾರಿಣಿಯಂತಿದ್ದಳು. ಅವಳಲ್ಲಿ ಉಂಟಾದ ಸಂಕೋಚದಿಂದ ಮತ್ತಷ್ಟು ರೂಪವತಿಯಾಗಿ ಕಂಡಳು. ಅವಳ ರೂಪವನ್ನು ನೋಡಿ ಬೃಹಸ್ಪತಿಯ ಮನಸ್ಸು ಚಂಚಲವಾಯಿತು.

'ಮಮತೆ !' ಕಾಮಾತುರನಾದ ಬೃಹಸ್ಪತಿಯು ಅವಳನ್ನು ಸಮೀಪಿಸಿ

'ನಿನ್ನ ಈ ರೂಪ, ಈ ಯೌವನ, ಈ ಆಕರ್ಷಣೆ ನನ್ನಿಂದ ಸಹಿಸಲು ಅಸಾಧ್ಯವಾಗಿದೆ' ಎಂದ

'ಬೃಹಸ್ಪತಿ !' ವಸ್ತ್ರಗಳಿಂದ ತನ್ನ ಅಂಗಾಂಗಳನ್ನು ಮುಚ್ಚಿಕೊಳುತ್ತಾ 'ನಿನ್ನಿಂದ ಈ ಅಗೌರವಯುತವಾದ ವರ್ತನೆ ? ನಾನು ನಿನ್ನ ಅಣ್ಣನ ಹೆಂಡತಿ. ಈ ಶರೀರದ ಮೇಲೆ ನಿನಗೆ ಯಾವ ಅಧಿಕಾರವೂ ಇಲ್ಲ' ಎಂದಳು ಮಮತಾ.

"ಯೌವನ ಮತ್ತು ರೂಪವನ್ನು ಎಲ್ಲಾ ಕಣ್ಣುಗಳು ನೋಡುತ್ತಿವೆ. ಅವುಗಳನ್ನು ಮುಚ್ಚಿಡಲು ಸಾಧ್ಯವಿದ್ದರೆ, ಅವುಗಳ ಸೃಷ್ಟಿಯನ್ನು ಭಗವಂತ ಏಕೆ ಮಾಡುತ್ತಿದ್ದ ?" ರತಿ ಸುಖದ ಲಾಲಸಿಯಾದ ಬೃಹಸ್ಪತಿಯು ಲಜ್ಜೆಗೆ ತಿಲಾಂಜಲಿ ಬಿಟ್ಟಿದ್ದ

ಏಕಾಂತವಾದ ಸ್ಥಳ. ವೃಕ್ಷಗಳ ನೆರಳಿನಲ್ಲಿ ಸುಗಂಧ ಹರಡಿತ್ತು. ಮಂದ ಮಾರುತವು ಕಾಮಪೀಡಿತರಿಗೆ ಹೆಚ್ಚು ಒಲವು ಕೊಟ್ಟಿತ್ತು. ಬೃಹಸ್ಪತಿಯು ನಾಲ್ಕೂ ಕಡೆಯೂ ನೋಡಿದ ಪ್ರಕೃತಿ ನಗುತ್ತಿತ್ತು ಸರೋವರದಲ್ಲಿ ಹಂಸ ಹಂಸಿಗಳು ವಿಹರಿಸುತ್ತಿದ್ದವು. ಕಮಲಗಳು ಅರಳಿದ್ದವು. ಕಮಲ ಸೂರ್ಯನನ್ನು ನೋಡಿ ಸಂತೋಷ ಪಡುತ್ತಿತ್ತು ನೈದಿಲೆ ಚಂದ್ರನ ವಿಯೋಗದಿಂದ ನಂದಿತ್ತು. ಅರಳಿದ ಹೂವುಗಳ ಮೇಲೆ ಭ್ರಮರ ಕುಳಿತಿತ್ತು ದುಂಬಿ ಅದರ ಸುತ್ತಲೂ ತಿರುಗುತ್ತಿತ್ತು. ನ್ಯಗ್ರೋಧ ವೃಕ್ಷಗಳಿಂದ ಹಣ್ಣುಗಳು ನೀರಿಗೆ ಬಿದ್ದು ಶಬ್ದ ಮಾಡುತ್ತಿದ್ದವು. ನೀರಿಗೆ ಬಿದ್ದ ಹಣ್ಣನ್ನು ಹಿಡಿಯಲು ಹಂಸ ಮತ್ತು ಹಂಸಿ ಓಡುತ್ತಿದ್ದವು ಹಂಸವು ಹಣ್ಣನ್ನು ತಂದು ಹಂಸಿಯ ಬಾಯಿಯಲ್ಲಿ ಇಡುತ್ತಿತ್ತು. ಹಂಸಿನಿ ಸಂತೋಷ ಪಡುತ್ತಿತ್ತು ಹಂಸ ತನ್ನ ಉದ್ದವಾದ ಕೊರಳನ್ನು ಹಂಸಿಯ ಕೊರಳ ಮೇಲೆ

ಇಡುತ್ತಿತ್ತು.

ಪ್ರಕೃತಿಯ ಈ ಸರಸ ಸಲ್ಲಾಪಗಳಿಂದ ಬೃಹಸ್ಪತಿಯ ಕಾಮುಕತೆ ಅಪೂರ್ವ ಅನುಭವವನ್ನು ಪಡೆಯುತ್ತಿತ್ತು. ಮಮತಳ ಸ್ಪರ್ಶಸುಖದಲ್ಲಿ ಮುಳಗಿ ಹೋಗಲು ಅವಳ ಕಡೆ ನಡೆದ.

"ಬೇಡ ಬೇಡ" ಎಂದು ಲತಾಂಗಿ ಎದ್ದು ನಿಂತಳು. ಅವಳ ಆ ನಾರೀರೂಪ ನಾಚಿದ ಶರೀರದ ರೂಪ ಅವಳ ಲಾವಣ್ಯವನ್ನು ಇನ್ನೂ ಹೆಚ್ಚಿಸಿತು. ಬೃಹಸ್ಪತಿ ಎಲ್ಲವನ್ನೂ ಮರೆತು ಕಾಮ ರೂಪಿಯಾದ ಸುಂದರ ರೂಪಿಯಾದ ಯುವತಿಯ ಅಧೈರ್ಯವು ಕಾಮಾಗ್ನಿಗೆ ತುಪ್ಪ ಸುರಿದಾಂತಾಗಿತ್ತು. ಕಾಮಾಗ್ನಿಯು ಉರಿಯ ತೊಡಗಿತು. ಜ್ವಾಲೆಗಳು ಮೇಲೆದ್ದವು ಆ ಜ್ವಾಲೆಯಲ್ಲಿ ಬೃಹಸ್ಪತಿಯು ಐಕ್ಯ ನಾಗಲು ಇಚ್ಛಿಸಿದ. ಹುಚ್ಚ ಕಾಮಿಯಾಗಲು ಬಯಸಿದ

ಅಬಲೆಯಾದ ಮಮತೆಯು ಪುರುಷನನ್ನು ಎದುರಿಸಲು ಅಶಕ್ತಳಾದಳು ಬೃಹ ಸ್ಪತಿಯ ತೋಳತೆಕ್ಕೆಯಲ್ಲಿ ಮುದುರಿದ ಲತೆಯಂತಾದಳು. ಅಸಹಾಯಕಳಾದ ಮಮತೆಯು ದೈನ್ಯದಿಂದ.

"ಬೃಹಸ್ಪತಿ! ನನ್ನ ಗರ್ಭದಲ್ಲಿ ನಿನ್ನ ಹಿರಿಯ ಸಹೋದರನ ಸಂತಾನವಿದೆ" ಎಂದಳು

"ಮಮತೆ! ನಾನು ನಿನ್ನಲ್ಲಿ ರತಿ ಸುಖವನ್ನು ಅನುಭವಿಸ ಬೇಕೆಂದಿದ್ದೇನೆ. ನಿನ್ನ ಗರ್ಭ ನನ್ನ ಕಾರ್ಯದಲ್ಲಿ ತೊಂದರೆ ಮಾಡಲಾರದು" ಎಂದ ಬೃಹಸ್ಪತಿ.

ಬೃಹಸ್ಪತಿಯು ಕಾಮ ಪ್ರವಾಹದಲ್ಲಿ ಸಂಪೂರ್ಣ ಮುಳುಗಿ ಹೋಗಿದ್ದ. ಮಳೆ ಗಾಲದ ತೀವ್ರ ವೇಗದ ಪ್ರವಾಹದಂತೆ ಅವನ ವಾಸನಾವೇಗಕ್ಕೆ ತಡೆಯಿಲ್ಲದಂತಾ ಗಿತ್ತು. ಎಲ್ಲವನ್ನೂ ಅತಿಕ್ರಮಿಸಿ ಪ್ರವಾಹ ಹರಿಯ ತೊಡಗಿತು.

ಬೃಹಸ್ಪತಿಯು ಕಾಮ ಪ್ರವಾಹದಲ್ಲಿ ಮಮತೆಯೊಡನೆ ಮುಳುಗಲು ಹವಣಿಸು ತ್ತಿದ್ದ ಏಕಾಕಾರವಾಗಲು ಪ್ರಯತ್ನಿಸುತ್ತಿದ್ದ

"ನಿರ್ದಯಿ! ನಿನ್ನ ಅಣ್ಣನ ಪವಿತ್ರ ಗರ್ಭವನ್ನು ಹಾಳು ಮಾಡಲು ಅಪೇಕ್ಷಿ ಸುತ್ತಿದ್ದೀಯೇನು?" ಎಂದು ಅವನ ಬಾಹು ಪಾಶದಲ್ಲಿ ಒದ್ದಾಡುತ್ತಾ ಹೇಳಿ ದಳು

ಕಾಮುಕನ ತೋಳಿನಲ್ಲಿ ನಾರಿಯೂ, ದಯಾ ಯಾಚನೆಯಿಂದ ವ್ಯಾಕುಲಳಾಗು ವುದು ಎಲ್ಲವೂ ಕಾಮಾಗ್ನಿಯಲ್ಲಿ ಭಸ್ಮವಾಗುತ್ತದೆ. ಬೃಹಸ್ಪತಿಯ ಕಾಮಾಗ್ನಿಯು ಹೊಗೆಯಿಲ್ಲದ ಬೆಂಕಿಯಂತಿತ್ತು. ಆ ಮೈಥುನಾರ್ಥಿಯು

"ಮಮತೆ! ನಿನ್ನ ವಿನಯ ನನಗೆ ಬೇಕಾಗಿಲ್ಲ. ಈ ಸಮಯ ಪೂರ್ತಿಯಾಗ ಬೇಕಾಗಿದೆ" ಎಂದ.

"ಬೃಹಸ್ಪತಿ! ನಿನಗಿಂತ ಮೊದಲೇ ನಾನಿಲ್ಲಿದ್ದೇನೆ" ಎಂದು ಬೃಹಸ್ಪತಿಯ ಶುಕ್ಲೋತ್ಸರ್ಗ ಸಮಯದಲ್ಲಿ ಗರ್ಭದಲ್ಲಿದ್ದ ಪಿಂಡ ಹೇಳಿತು.

'ಕುಳಿತುಕೋ' ಎಂದು ತಿರಸ್ಕಾರದಿಂದ ಹೇಳಿದ ಬೃಹಸ್ಪತಿ.

'ಶುಕ್ಲವನ್ನು ಬೆರಸುತ್ತಾ ಅನುಚಿತ ಕಾರ್ಯ ಮಾಡಬೇಡ'

'ಸುಮ್ಮನಿರು'

ಆದರೆ ಗರ್ಭ ವಿರೋಧಿಸಿತು. ಈ ಪ್ರತಿ ರೋಧವನ್ನು ಬೃಹಸ್ಪತಿ ಸಹಿಸದಾದ. ಪ್ರಯತ್ನ ಮಾಡತೊಡಗಿದ. ಗರ್ಭದ ಪ್ರತಿರೋಧ ಹೆಚ್ಚಾಯಿತು. ಕಾಮೋತ್ತೇಜನೆ ತೀವ್ರವಾಯಿತು. ರತಿ ಸುಖದಲ್ಲಿ ತೊಂದರೆಯಾಯಿತು. ಅತೃಪ್ತ ಕಾಮ ವಾಸನೆಯ ಪ್ರತಿ ಕ್ರಿಯೆ ಹಿಂಸೆ ರೂಪತಾಳಿತು ಕಾಮ ಮೂರ್ತಿಯಾದ ಬೃಹಸ್ಪತಿ ಹಿಂಸಾ ಮೂರ್ತಿಯಾದ ಆವೇಶದಿಂದ ಶಪಿಸಿದ, ಹುಟ್ಟುತ್ತಲೇ ಕುರುಡನಾಗೆಂದು. ಕಾಮಾಂಧನಾದ ಬೃಹಸ್ಪತಿಯು ಗರ್ಭದಲ್ಲಿದ್ದ ಶಿಶುವನ್ನು ಜನ್ಮಾಂಧನಾಗೆಂದು ಶಪಿಸಿದ ಮಮತೆ ಅತ್ತಳು.

'ನೋಡು ನಿನ್ನ ಮಗು ದೀರ್ಘಾಂಧನಾಗುತ್ತಾನೆ' ಎಂದು ನಿರ್ದಯಿ ಕ್ರೂರವಾಗಿ ಹೇಳಿದ.

ಮಾತೃ ಹೃದಯ ಶಿಶುವಿನ ಅಂಧಕಾರ ಮಯವಾದ ಭವಿಷ್ಯವನ್ನು ಕಲ್ಪಿಸಿಕೊಂಡು ಕರಗಿತು ಕಾಮಾಂಧ ಬೃಹಸ್ಪತಿಯು ಮೋಡಗಳ ಮಧ್ಯೆ ಮರೆಯಾದ.

ದೀರ್ಘತಮನು ಹುಟ್ಟಿದ ಅವನ ಕಣ್ಣುಗಳು ತೇಜಸ್ವಿಯಾಗಿದ್ದವು ಎಲ್ಲರೂ ಸಂತಸಗೊಂಡರು. ಆದರೆ ಶಾಪದಿಂದ ಅವನ ನೇತ್ರ ಜ್ಯೋತಿಯು ನಂದಿತು ಮಗು ಕುರುಡಾಯಿತು

ದೀರ್ಘತಮನು ಮೇಧಾವಿಯಾಗಿದ್ದ. ಅವನನ್ನು ಮಾಮತೇಯನೆಂದೂ ಕರೆಯುತ್ತಿದ್ದರು. ಅವನು ಸುಮಧುರ ಗಾಯಕನೂ ಆಗಿದ್ದ ಅವನ ಜೀವನ ಕಷ್ಟವಾಗುತ್ತಿತ್ತು ಮತ್ತೊಬ್ಬರ ಆಶ್ರಯ ಅವನಿಗೆ ಬೇಕಾಗುತ್ತಿತ್ತು. ದೇವತೆಗಳೂ ಸಹ ಇವನನ್ನು ನೋಡಿ ದುಃಖ ಪಟ್ಟರು

ಕಾಲಾಂತರದಲ್ಲಿ ದೀರ್ಘತಮನು ದೇವತೆಗಳನ್ನು ಶರಣು ಹೊಕ್ಕ. ದೃಷ್ಟಿದಾನಕ್ಕಾಗಿ ಸುತ್ತಿಸಿದ. ಜಾತವೇದ ಅಗ್ನಿನಿಮಿತ್ತವಾಗಿ ಸ್ತವನವನ್ನು ಪ್ರಾರಂಭಿಸಿದ ದಿವ್ಯ ವಾಣಿಯು ಅನಾಯಾಸದಿಂದ ಅವನ ಕಂಠದಿಂದ ಹೊರ ಹೊಮ್ಮಿತು. ಮಂತ್ರಗಳು ತಾನಾಗಿಯೆ ಮುಖದಿಂದ ಮುಖರಿತವಾದವು ಅವನಿಗೆ ಮಂತ್ರಗಳ ದರ್ಶನವಾಯಿತು.

ವೇದಗಳಲ್ಲಿ ಪ್ರತಿಷ್ಠಿತವಾದ ಜ್ಯೋತಿರ್ಮಯ ಅಗ್ನಿಗಾಗಿ ಹವಿಸ್ಸನ್ನು ಸಂಪಾದಿಸಬೇಕು. ಕತ್ತಲನ್ನು ಹೋಗಲಾಡಿಸುವ ಜ್ಯೋತಿರ್ಮಯ ಅಗ್ನಿಯು ಸ್ತೋತ್ರಗಳಿಂದ ಅನುಗ್ರಹಿಸಲಿ. ಅಗ್ನಿಯು ಒಂದು ಮುಖದಲ್ಲಿ ಹವಿಸ್ಸನ್ನು ಮತ್ತೊಂದು ಮುಖದಲ್ಲಿ ವೃಕ್ಷಗಳನ್ನು ಭಕ್ಷಿಸುತ್ತದೆ. ಎರಡು ಸಾರಿ ಪ್ರತ್ಯಕ್ಷವಾದ ಅಗ್ನಿಯು ಮೂರು ವಿಧವಾದ ಅನ್ನವನ್ನು ಕೊಡುತ್ತದೆ. ಪುನಃ ಒಂದು ವರ್ಷದಲ್ಲಿ ಮುಪ್ಪನ್ನು ಅನುಗ್ರಹಿಸುತ್ತದೆ. ನಾಲ್ಕು ಕಡೆ ಅದರ ಸ್ಪರ್ಶ ಉಂಟಾಗುತ್ತದೆ. ಶಬ್ದ ಮಾಡುತ್ತಾ

ಅಗ್ನಿಯು ಶ್ವಾಸವನ್ನು ತೆಗೆದು ಕೊಂಡರೆ ಅದರ ಸ್ಫುಲಿಂಗಗಳು ನಾಲ್ಕು ದಿಕ್ಕಿನಲ್ಲೂ ಹರಡುತ್ತವೆ. ಅಂಧಕಾರ ನಾಶವಾಗುತ್ತದೆ. ಔಷದಿಗಳಲ್ಲಿಯೂ ವ್ಯಾಪಿಸಿರುತ್ತದೆ. ಅವುಗಳಲ್ಲಿ ದಿವ್ಯ ಗುಣಗಳು ಉಂಟಾಗುತ್ತವೆ. ಅಗ್ನಿ ಮತ್ತು ಔಷದಿಗಳು ಒಟ್ಟಿಗೆ ಸೇರಿ ಆಕಾಶ ಮತ್ತು ಪೃಥ್ವಿಯನ್ನು ಶ್ರೇಷ್ಠವಾಗಿ ಮಾಡುತ್ತವೆ. ಉದ್ದವಾದ ಶಿಖೆಗಳು ಅಗ್ನಿಯನ್ನು ಮುಟ್ಟುತ್ತವೆ. ಮರಣವಾದಾಗ ಅದೇ ಪ್ರಾಣ ವಾಯುವಾಗುತ್ತದೆ. ಪೃಥ್ವಿಯು ತಾಯಿಯಂತೆ ಹುಲ್ಲು ಹಾಗೂ ಔಷಧಿಗಳು ಇರುತ್ತವೆ ವಿದ್ಯುತ್ ವೇಗದಂತೆ ಚಲಿಸುತ್ತದೆ ದ್ವಿಪದ ಹಾಗೂ ಚತುಷ್ಪದ ಜೀವಿಗಳಿಗೆ ಶಕ್ತಿಯನ್ನು ಕೊಡುತ್ತದೆ. ಅವು ಯಾವ ಮಾರ್ಗದಲ್ಲಿ ಚಲಿಸುತ್ತವೆಯೋ ಅದರ ಪಕ್ಕದ ಭಾಗವು ಕಪ್ಪಾಗುತ್ತದೆ. ದಾನ ಶೀಲರ ಮನೆಯಲ್ಲಿ ಅಗ್ನಿಯು ಪ್ರಜ್ವಲಿಸುತ್ತದೆ ವೃಷಭನಂತೆ ಶ್ವಾಸವನ್ನು ತೆಗೆದು ಕೊಳ್ಳುತ್ತದೆ. ಬಾಲ್ಯದಲ್ಲಿ ಕವಚ ಧರಿಸಿ ವ್ಯಕ್ತಿಯಂತೆ ಅಗ್ನಿಯು ಕುಮಾರನಂತೆ ಕಾಣುತ್ತದೆ ಅಗ್ನಿಯೇ ಈ ನನ್ನ ಸರ್ವೋತ್ತಮ ಪ್ರಾರ್ಥನೆಯು ಎಲ್ಲರಿಗೂ ಪ್ರಿಯವಾಗಲಿ. ನಿನ್ನ ನಿರ್ಮಲವಾದ ಶರೀರ ಹೊಳೆಯಲಿ. ರಮಣಿಯ ಧನವನ್ನು ಅನುಗ್ರಹಿಸು ಮನುಷ್ಯರಿಗೂ ಹಾಗೂ ಯೋಧರಿಗೂ ಆಶ್ರಯವನ್ನು ಅನುಗ್ರಹಿಸು.

ಅಗ್ನಿಯೇ ! ನಿನ್ನ ಕೃಪೆಯಿಂದ ಇಷ್ಟಾರ್ಥ ಸಿದ್ಧಿಸಲಿ ಸತ್ಯವು ಪ್ರಕಾಶವಾಗಲಿ. ಅಗ್ನಿಯೆ ! ಅನ್ನದಲ್ಲಿದ್ದೀಯೆ ಸಪ್ತಮಾತೃಕೆಯಲ್ಲಿಯೂ ಇದ್ದೀಯೆ ನಿನ್ನನ್ನು ಘರ್ಷಿಸುವುದರಿಂದ ಹತ್ತು ಬೆರಳುಗಳು ಹುಟ್ಟುತ್ತವೆ ಋತ್ವಿಜರು ಯಜ್ಞ ಸಿದ್ಧಿಗಾಗಿ ಅಗ್ನಿಯನ್ನು ಉತ್ಪಾದಿಸುತ್ತಾರೆ ಅದರ ಪವಿತ್ರತೆಗಾಗಿ ನಾಲ್ಕು ದಿಕ್ಕುಗಳಿಗೂ ಒಯ್ಯುತ್ತಾರೆ ಔಷಧಿಗಳ ಮೇಲೆ ಹಾಕುತ್ತಾರೆ ಅರಣಿ ಮಂಥನದಿಂದ ಅಗ್ನಿ ಹುಟ್ಟುತ್ತದೆ ಅದು ಆಗ ಯುವಾವಸ್ಥೆಯಲ್ಲಿರುತ್ತದೆ ಎಲ್ಲಾ ಔಷಧಿಗಳ ಕಡೆಗೆ ಹರಿಯುತ್ತದೆ. ವಿಶ್ವಕ್ಕೆ ಆಧಾರವಾದ ಅಗ್ನಿಯನ್ನು ಕಾಪಾಡಲು ಮಾನವರ ಸ್ತೋತ್ರದಿಂದ ಸಾಧ್ಯವಾಗುತ್ತದೆ. ಅದನ್ನೇ ಹೋತಾ ಎಂದು ಕರೆಯುತ್ತಾರೆ ಅಗ್ನಿಯೆ ! ಇಂದ್ರನನ್ನು ಕರೆದು ಕೊಂಡು ಬಾ ಈ ಸ್ತೋತ್ರವು ನಿನ್ನನ್ನು ಕುರಿತೆ ಮಾಡಿದ್ದಾಗಿದೆ. ಋತ್ವಿಜರು ಯಜ್ಞಶಾಲೆಯಲ್ಲಿ ದರ್ಭೆಯನ್ನು ಹಾಡಿರುತ್ತಾರೆ ವಿಶಾಲ ಮಂಟಪಕ್ಕೆ ದೇವತೆಗಳನ್ನು ಆಹ್ವಾನಿಸುತ್ತಾರೆ ಇಂದ್ರನಿಗಾಗಿ ಅಲಂಕರಿಸುತ್ತಾರೆ. ದೇವತೆಗಳಿಂದ ಸ್ಥಾಪಿಸಿರುವ ಭಾರತೀ, ಸರಸ್ವತೀ ಮತ್ತು ಇಳಾ ಇವರುಗಳು ಹರಡಿರುವ ಕುಶಾಸನದ ಮೇಲೆ ಕುಳಿತು ಕೊಳ್ಳಲಿ. ತ್ವಷ್ಟಾ ಪುಷ್ಟಿಕರ ನೀರನ್ನು ಸುರಿಸಲಿ. ವನಸ್ಪತಿಗಳೇ ನೀವೇ ದೇವತೆಗಳಲ್ಲಿಗೆ ಬಂದು ಯಜ್ಞ ಮಾಡಿರಿ ಮೇಧಾವಿಯಾದ ಅಗ್ನಿಯು ಹವಿಸ್ಸನ್ನು ದೇವತೆಗಳಿಗೆ ತಲಪಿಸುತ್ತಾನೆ ಹೇ ಇಂದ್ರ ! ಮಂತ್ರಗಳಿಂದ ನಿನ್ನನು ಆಹ್ವಾನಿಸುತ್ತೇನೆ ಹವಿಸ್ಸನ್ನು ಸ್ವೀಕರಿಸು

ಬಲನನ ಮಗ ಅಗ್ನಿ. ಅವನನ್ನು ಮತ್ತೆ ಸ್ತುತಿಸುತ್ತೇನ ಅವರು ಜಲದಿಂದ ಹುಟ್ಟಿದರು. ಹೋತೃವಾಗಿ ಧನಸಹಿತವಾಗಿ ಯಜ್ಞದಲ್ಲಿ ಪ್ರಕಾಶಿಸುತ್ತಾರೆ ಅಗ್ನಿಯು

ಮಾತರಿಶ್ವ. ಆಕಾಶದಿಂದ ಹುಟ್ಟಿದ್ದಾನೆ. ಅವನು ಉಜ್ವಲ ಪ್ರಕಾಶದಿಂದ ಆಕಾಶ ಮತ್ತು ಭೂಮಿಯನ್ನು ಬೆಳಗಿಸುತ್ತಾನೆ.

ಅಗ್ನಿ ಎಲ್ಲೆಡೆ ಇದೆ. ಎಲ್ಲೆಡೆ ಹರಿದಾಡುತ್ತದೆ, ಸ್ತುತಿಗೆ ಯೋಗ್ಯವಾಗಿದೆ. ಅಹಂಕಾರಹೀನನಾದ ಪುರುಷನು ಅಗ್ನಿಯ ಆಶ್ರಯವನ್ನು ಪಡೆಯುತ್ತಾನೆ. ಮೂರು ಮುಖವುಳ್ಳ, ಏಳು ರಶ್ಮಿಗಳುಳ್ಳ, ಅಂತರಿಕ್ಷದಲ್ಲಿ ಇರುವ ಜ್ಯೋತಿರ್ಮಯನು. ನಕ್ಷತ್ರಗಳಲ್ಲಿ ತೇಜಸ್ವಿಯಾಗಿರುವ ಅಗ್ನಿಯನ್ನು ಸ್ತೋತ್ರಮಾಡಿ ಅಗ್ನಿಗೆ ಮುಪ್ಪಿಲ್ಲ. ನಾನು ನಿನ್ನನ್ನು ಸ್ತೋತ್ರ ಮಾಡುವವನಾಗಿದ್ದೇನೆ. ಅದ್ಭುತವಾದ ಅಗ್ನಿಯು ವೃಕ್ಷಗಳನ್ನು ಭಕ್ಷಿಸುತ್ತದೆ ಪ್ರಕಾಶದೊಂದಿಗೆ ಜ್ಯೋತಿರ್ಮಯವಾಗುತ್ತದೆ. ಇದರ ಜ್ವಾಲೆಗಳನ್ನು ಗಾಳಿ ಉಜ್ವಲಗೊಳಿಸುತ್ತದೆ ಹೇ ಮೇಧಾವಿ ಅಗ್ನಿಯೆ! ನೀನು ಅತ್ಯಂತ ಯಶಸ್ವಿಯಾದವನು ಎಲ್ಲರನ್ನೂ ಸಂತೋಷಗೊಳಿಸುತ್ತೀ ಸಾಧಕರಾದ ನಮಗೆ ಸಿದ್ಧಿಯನ್ನುಂಟುಮಾಡು!

ದೀರ್ಘತಮನು ಮಿತ್ರಾವರುಣರನ್ನು ಸ್ತುತಿಸಿದ.

ಮಿತ್ರಾ ವರುಣರೆ! ಇಚ್ಛಿಸಿದ್ದನ್ನು ಕೊಡುವ ಸೋಮರಸವನ್ನು ಋತ್ವಿಜರು ಅರ್ಪಿಸಿದ್ದಾರೆ ನಿಮ್ಮ ಉತ್ಪತ್ತಿಯನ್ನು ಆಕಾಶ ಪೃಥ್ವಿಯು ಹೇಳುತ್ತವೆ ಯಜ್ಞದ ಸ್ತುತಿಗಳಿಂದ ಪ್ರತ್ಯಕ್ಷರಾಗುತ್ತೀರಿ. ತಾವು ಧರ್ಮಮಾರ್ಗ ಪೋಷಕರಾಗಿದ್ದೀರಿ. ಯಜ್ಞದ ಜ್ವಾಲೆಗಳು ನಿಮ್ಮನ್ನು ಸ್ತೋತ್ರ ಮಾಡುತ್ತವೆ ತಾವಿಬ್ಬರೂ ತೇಜೋರೂಪಗಳಾದ ವಸ್ತುಗಳನ್ನು ಧರಿಸುತ್ತೀರಿ ವಿಷ್ಣುವನ್ನು ಸ್ತುತಿಸಿದ.

ನೀನು ಮೂರು ಪಾದಗಳಿಂದ ಜಗತ್ತನ್ನು ಅಳೆದೆ ಅದರಲ್ಲಿ ಸಂಪೂರ್ಣ ಜಗತ್ತು ವಾಸ ಮಾಡುತ್ತಿದೆ, ತ್ರಿಗುಣಾತ್ಮಕ ಆಕಾಶ, ಪೃಥ್ವೀ ಹಾಗೂ ಲೋಕಗಳನ್ನು ನೀನು ಧರಿಸಿದ್ದೀಯೆ ಅಂಥಹ ವಿಷ್ಣುವಿನ ಪಾದಗಳ ಆಶ್ರಯವನ್ನು ಬೇಡುತ್ತೇನೆ. ವಿಷ್ಣುವೇ ಬಂಧು ಇಂದ್ರನು ಮಳೆಗರೆದು ಅನ್ನವನ್ನು ಕೊಡುತ್ತಾನೆ. ಈ ಅನ್ನದಿಂದ ರೇತಸ್ಸು, ಆ ರೇತಸ್ಸಿನಿಂದ ಸಂತಾನವಾಗುತ್ತದೆ ಪ್ರಾಣಿಗಳ ಉತ್ಪತ್ತಿ ಇಂದ್ರ ವಿಷ್ಣುವಿನ ಅಧೀನ ಪ್ರಾಣಿಗಳು ವಿಷ್ಣುವಿನ ಎರಡು ಪಾದಗಳನ್ನು ನೋಡುತ್ತವೆ ಮೂರನೇ ಪಾದವನ್ನು ನೋಡಲು ಯಾರೂ ಪ್ರಯತ್ನಿಸಿಲ್ಲ. ಆಕಾಶಗಾಮಿಗಳಾದ ಮರುದ್ಗಣಗಳಿಗೂ ಸಾಧ್ಯವಿಲ್ಲ ಅವನು ತ್ರೈಲೋಕ್ಯ ಪತಿಯಾಗಿದ್ದಾನೆ ಯಜಮಾನನಿಗೆ ಯಜ್ಞಫಲ ಸಿಗುವಂತೆ ಮಾಡುತ್ತಾನೆ.

ದೀರ್ಘತಮನು ಅಶ್ವಿನೀಕುಮಾರರನ್ನು ಸ್ತೋತ್ರ ಮಾಡಿದ

'ಅಶ್ವಿನೀ ಕುಮಾರರೇ? ಮಾತೃ ಭೂಮಿಯನ್ನು ಮಧು ಮತ್ತು ತುಪ್ಪದಿಂದ ಸಿಂಪಡಿಸಿ ಮೂರು ಚಕ್ರದ ರಥವು ಶೀಘ್ರಗಾಮಿ ಕುದುರೆಗಳಿಂದ ಯುದ್ಧದಲ್ಲಿ ಹೇಗೆ ಚಲಿಸುತ್ತದೆಯೋ ಹಾಗೆ ನಾನು ನಿಮ್ಮ ಆಶ್ರಯವನ್ನು ಪಡೆಯುವಂತಾಗಲಿ. ನನ್ನನ್ನು ಶಕ್ತಿವಂತನನ್ನಾಗಿ ಮಾಡಿ ನನ್ನನ್ನು ದೀರ್ಘಾಯುಷಿಯನ್ನಾಗಿ ಮಾಡಿ. ನನ್ನ ಪಾಪವನ್ನು ದೂರಮಾಡಿ. ನೀವು ಶ್ರೇಷ್ಠ ವೈದ್ಯರು ಸಮರ್ಥ ರಥಿಕರು.

ನಾನು ನಿಮಗೆ ಹವಿಸ್ಸನ್ನು ಕೊಡುತ್ತೇನೆ. ನಿಮ್ಮ ಕರುಣೆಗಾಗಿ ನಮಸ್ಕರಿಸುತ್ತಾ ನಿಂತಿದ್ದೇನೆ.

ದೀರ್ಘತಮನು ದ್ಯಾವಾಪೃಥಿವಿಯನ್ನು ಸ್ತುತಿಸಿದ.

ಜ್ಞಾನವನ್ನು ವೃದ್ಧಿಸುವಂತೆ ಆಕಾಶ ಮತ್ತು ಭೂಮಿಯನ್ನು ಸ್ತುತಿಸುತ್ತೇನೆ. ಯಜಮಾನನು ನಿನ್ನ ಮಗನಂತಿದ್ದಾನೆ. ತಂದೆಯಂತಿರುವ ಆಕಾಶಕ್ಕೂ ತಾಯಿಯಂತಿರುವ ಭೂಮಿಗೂ ನಮಸ್ಕರಿಸುತ್ತೇನೆ ತಾವಿಬ್ಬರೂ ಒಂದೇ ಸ್ಥಳದಲ್ಲಿ ಜನ್ಮಿಸಿದವರು ಆವರೆ ಸೂರ್ಯನ ಕಿರಣಗಳು ನಿಮ್ಮನ್ನು ಬೇರ್ಪಡಿಸಿವೆ.

ದೀರ್ಘತಮನು ಋತುಗಳನ್ನು ಸ್ತೋತ್ರ ಮಾಡಿದ.

ಋತುಗಳೆ ! ಹಸುಗಳು ಪುನರ್ಜೀವಿಸಲು ಸಹಾಯಕರಾಗಿದ್ದೀರಿ. ವೃದ್ಧ ತಂದೆಗೆ ಯೌವನವನ್ನು ದಯಪಾಲಿಸಿದ್ದೀರಿ. ಅಶ್ವದಿಂದ ಅಶ್ವವು ಹುಟ್ಟಲು ಕಾರಣರಾಗಿದ್ದೀರಿ ಪ್ರಾಣಿಗಳಿಗೆ ಉನ್ನತ ಸ್ಥಳದಲ್ಲಿ ಹುಲ್ಲು ಮುಂತಾದವುಗಳು ಸಿಕ್ಕುವಂತೆಯೂ, ಕೆಳಭಾಗದಲ್ಲಿ ನೀರು ಸಿಕ್ಕುವಂತೆಯೂ ಮಾಡಿದ್ದೀರಿ. ನನ್ನಮೇಲೂ ಕೃಪೆ ಮಾಡಿ.

ದೀರ್ಘತಮನು ಅಶ್ವ ಅಗ್ನಿಯನ್ನು ಸ್ತೋತ್ರ ಮಾಡಿದ.

ಅಶ್ವವೆ ! ಸಮುದ್ರದಿಂದ ಹುಟ್ಟಿ ಶಬ್ದ ಮಾಡುತ್ತೀ. ಗಿಡುಗನಂತೆ ನಿನಗೆ ರೆಕ್ಕೆಗಳಿವೆ ಜಿಂಕೆಯಂತೆ ಕೊಂಬುಗಳಿವೆ. ಇಂದ್ರನು ಪ್ರಪ್ರಥಮವಾಗಿ ನಿನ್ನ ಮೇಲೆ ಕುಳಿತಿದ್ದ. ಗಂಧರ್ವರು ನಿನ್ನ ಹಗ್ಗವನ್ನು ಹಿಡಿದಿದ್ದರು. ನೀನು ಹಾಲಿನ ಬಣ್ಣದಂತೆ ಇರುವೆ. ಸೂರ್ಯನಂತೆ ತೇಜಸ್ವಿಯಾಗಿರುವೆ. ಆಕಾಶ, ಜಲ, ಅಂತರಿಕ್ಷ ಇವು ಮೂರು ನಿನ್ನನ್ನು ಬಂಧಿಸುವ ಸ್ಥಾನಗಳು. ನೀನೇ ವರುಣ ನಿನ್ನ ಹಿಂದೆ ರಥ ಚಲಿಸುತ್ತದೆ ಮನುಷ್ಯರು ಹಸುಗಳು ನಿನ್ನ ಹಿಂದೆ ಬರುತ್ತಾರೆ. ನಾರಿಯರ ಸೌಭಾಗ್ಯವು ನಿನ್ನ ಹಿಂದೆ ಬರುತ್ತದೆ. ನಿನ್ನ ಹಣೆ ಚಿನ್ನದಿಂದ ಅಲಂಕೃತವಾಗಿದೆ ಕಾಲುಗಳಿಗೆ ಲೋಹದ ಆವರಣವಿದೆ ನೀನೂ ಹಾರಲೂ ಬಲ್ಲೆ ವಾಯು ವೇಗದಂತೆ ಚಲಿಸಬಲ್ಲೆ

ದೀರ್ಘತಮನು ವಿಶ್ವ ದೇವಗಳನ್ನು ಸ್ತುತಿಸಿದ.

ನೀನು ಸೂರ್ಯನ ಮಧ್ಯಮ ಸಹೋದರ. ವಾಯುವಿನ ಕನಿಷ್ಠ ಸಹೋದರ ಅಗ್ನಿ ನಿನಗೆ ಒಂದು ಚಕ್ರದ ರಥವಿದೆ. ಅದಕ್ಕೆ ಏಳು ಕುದುರೆಗಳನ್ನು ಕಟ್ಟಲಾಗಿದೆ. ಪೃಥ್ವಿಯಲ್ಲಿ ಗಾಯತ್ರೀ ಛಂದಸ್ಸು. ಅಂತರಿಕ್ಷದಲ್ಲಿ ತ್ರಿಷ್ಟುಪ ಛಂದಸ್ಸು ಆಕಾಶದಲ್ಲಿ ಜಗತೀ ಛಂದಸ್ಸನ್ನು ಸ್ಥಾಪಿಸಿದ್ದೀಯೆ. ಗಾಯತ್ರೀ ಛಂದಸ್ಸಿನಿಂದ ಋಜುಗಳ ರಚನೆಯಾಗಿದೆ. ಋಜುಗಳಿಂದ ಸೋಮನ ರಚನೆಯಾಗಿದೆ. ತ್ರಿಷ್ಟುಪ್ ಛಂದಸ್ಸಿನಿಂದ ಯಜುರ್ವಾಕ್ಯಗಳೂ ಆಗಿವೆ ಎರಡು ಅಥವಾ ನಾಲ್ಕು ಪದಗಳ ವಾಣಿಯಿಂದ ವಾಕ್ ಹುಟ್ಟಿದೆ. ಅಂತರಿಕ್ಷದಿಂದ ಏಳು ಛಂದಸ್ಸುಗಳು ಹುಟ್ಟಿವೆ. ಜಗತೀ ಛಂದಸ್ಸಿನಿಂದ ಆಕಾಶದಲ್ಲಿ ನೀರನ್ನು ಸ್ಥಾಪಿಸಲಾಗಿದೆ.

ನಾನು ಏನೂ ಅರಿಯದವನಾದುದರಿಂದ ಕೇಳುತ್ತಿದ್ದೇನೆ ಸಂಸಾರಕ್ಕೆ ನಾಭಿ ಯಾವುದು ? ಅಶ್ವದ ವೀರ್ಯ ಎಲ್ಲಿ ? ವೇದಿಯೇ ಪೃಥ್ವಿಯ ಕೊನೆಯೆ ? ಯಜ್ಞವೇ ಸಂಸಾರದ ನಾಭಿಯೆ ? ಸೋಮವೇ ಅಶ್ವದ ವೀರ್ಯವೇ. ಬ್ರಹ್ಮವಾಣಿಯೆ ಪರಮ ಸ್ಥಾನವಲ್ಲವೆ ? ಯಜಮಾನರು ಅಗ್ನಿಯಿಂದ ಯಜ್ಞ ಮಾಡಿದರು. ಅದೇ ಮೊದಲನೇ ಧರ್ಮವಾಗಿತ್ತು ನೀರಿಗೆ ರೂಪ ಒಂದೇ ಅದು ಒಮ್ಮೆ ಮೇಲೆ ಹೋಗುತ್ತದೆ. ಒಮ್ಮೆ ಕೆಳಗೆ ಬರುತ್ತದೆ ಮೇಘವು ಮಳೆಯ ಮೂಲಕ ಪೃಥ್ವಿಯನ್ನು ತೃಪ್ತಿಗೊಳಿಸುತ್ತದೆ ಅಗ್ನಿ ಆಕಾಶವನ್ನು ಬೆಳಗಿಸುತ್ತದೆ

ದೀರ್ಘತಮನ ಗಾಢವಾದ ದಾರ್ಶನಿಕ ಸ್ತೋತ್ರದಿಂದ ದೇವತೆಗಳಿಗೆ ದಯೆ ಬಂದಿತು ಅವನಿಗೆ ದೃಷ್ಟಿ ಬಂದಿತು. ಜಗತ್ತಿನ ದೀರ್ಘತಮನು ಮಂತ್ರದ್ರಷ್ಟಾರನಾಗಿ ದೇವತೆಯಾದ ಅಷ್ಟರಲ್ಲಿ ಅವನು ವೃದ್ಧನಾದ

"ಈ ಮುದುಕ ಸಾಯುವುದಿಲ್ಲವೆ ?" ಎಂದು ಅವನ ಸೇವಕ ಮುಖ ತಿರುಗಿಸಿ ಹೇಳಿದ.

"ಕೂದಲು ಬಿಳುಪಾಗಿವೆ ಶರೀರವೂ ಚಲಿಸುತ್ತಿಲ್ಲ. ಆದರೂ ಬದುಕಬೇಕೆಂಬ ಆಸೆ ಇದೆ" ಎಂದು ಎರಡನೇ ಸೇವಕ ಹೇಳಿದ "ಕಣ್ಣು ಕಾಣಿಸುತ್ತಿಲ್ಲ ಅವನ ರಕ್ಷಣೆ ಮಾಡುತ್ತಾ ಆಯಾಸಗೊಂಡಿದ್ದೇನೆ" ಎಂದು ಮೂರನೇ ಸೇವಕ ಹೇಳಿದ.

"ನೋಡೋಣ ಇವನಿಂದ ಯಾವಾಗ ಮುಕ್ತಿ ? ಕೋಲನ್ನು ಹಿಡಿದು ನಡೆಯುತ್ತಾನೆ. ಜೀವನದಿಂದ ಮುಕ್ತನಾಗುವುದಿಲ್ಲ" ಎಂದು ಹೀಯಾಳಿಸಿಸುತ್ತಾ ಹೇಳಿದ ಇನ್ನೊಬ್ಬ ಪರಿಚಾರಕ. "ಇವನು ಸಾಯಬೇಕು" ಎಂದ ಎರಡನೆಯವನು "ಸರಿಯಾಗಿ ಹೇಳಿದೆ" ಎಂದು ಮೂರನೆಯವನು. ಹೇಗಾದರೂ ಮಾಡಿ ತಮ್ಮ ಯಜಮಾನರೂ ತಪಸ್ವಿಯೂ ಆದ ದೀರ್ಘತಮನಿಂದ ಮುಕ್ತರಾಗಲು ಯೋಚಿಸುತ್ತಿದ್ದರು

ನದಿ ಬಹಳ ಆಳವಾಗಿತ್ತು ನೀರು ನಿರ್ಮಲವಾಗಿತ್ತು ಅದನ್ನು ನೋಡಿದರೆ ಸ್ನಾನ ಮಾಡಬೇಕೆಂಬ ಆಸ ಹುಟ್ಟುತ್ತಿತ್ತು. ಸೇವಕರು ದೀರ್ಘತಮನನ್ನು ಸ್ನಾನಕ್ಕಾಗಿ ನದಿಗೆ ಕರೆತಂದರು ಅವನ ಇಂದ್ರಿಯಗಳು ಶಿಥಿಲವಾಗಿದ್ದವು. ಕೋಲೂರಿ ನಿಂತಿದ್ದ. ಬೆನ್ನು ಬಾಗಿತ್ತು ಅವನೊಬ್ಬ ತಪಸ್ವೀ ಮಂತ್ರದ್ರಷ್ಟಾರನಾಗಿದ್ದ ಅವನನ್ನು ಕೊಲ್ಲುವುದು ಸುಲಭ ಸಾಧ್ಯವಾಗಿರಲಿಲ್ಲ ಸ್ನಾನಕ್ಕಾಗಿ ಸೇವಕರ ಸಹಾಯದಿಂದ ನದಿಗೆ ಇಳಿದ ಕ್ರೂರಿಗಳಾದ ಪರಿಚಾರಕರು ಅವನನ್ನು ನದಿಗೆ ತಳ್ಳಿದರು ದೀರ್ಘತಮನು ಕೈಕಾಲುಗಳನ್ನು ಆಡಿಸುತ್ತಾ ಸಹಾಯಕ್ಕಾಗಿ ಕೂಗಿಕೊಂಡ ಮುಳುಗುತ್ತಿರುವ ಅವನನ್ನು ನೋಡಿ ಸೇವಕರು ಹೆದರಿದರು ಮೂರನೇ ಸೇವಕನು ತಕ್ಷಣ ಚೂರಿಯನ್ನು ಹೊರತೆಗೆದ ದೀರ್ಘತಮನು ಮೃತ್ಯುವಿನೊಡನೆ ಹೋರಾಡುತ್ತಿದ್ದನು. ಮೂರನೆಯವನು ಚೂರಿ ಹಿಡಿದು ಮುದುಕನ ಮೇಲೆ

ಆಕ್ರಮಣ ಮಾಡಿದ. ಮುದುಕನ ಮೇಲೆ ದಯೆ ಬರಲಿಲ್ಲ. ಆಶ್ಚರ್ಯ! ಉಳಿದ ಸೇವಕರು ಅಲ್ಲಿಂದ ಓಡಿದರು. ಮೂರನೆಯವನ ಆಯುಧ ದೀರ್ಘತಮನ ಮೇಲೆ ಆಕ್ರಮಣ ಮಾಡಲಿಲ್ಲ. ಆದರೆ ಅದೇ ಚೂರಿಯಿಂದ ಮೂರನೆಯವನ ಶರೀರ ಚೂರು ಚೂರಾಯಿತು. ಅವನ ಮೃತ ಶರೀರ ನೀರಿನಲ್ಲಿ ತೇಲಿಹೋಯಿತು. ದೀರ್ಘತಮ ಪ್ರಜ್ಞಾಹೀನನಾಗಿದ್ದ. ನೀರಿನಲ್ಲಿ ತೇಲಿಹೋಗುತ್ತಿದ್ದ. ಎಲ್ಲೋ ಒಂದು ಕಡೆ ನದಿಯ ದಡದಲ್ಲಿ ಅವನ ಶರೀರ ನಿಂತಿತು. ಆಗ ಅವನಿಗೆ ಪ್ರಜ್ಞೆ ಬಂದಿತ್ತು. ನೂರು ವರ್ಷ ಜೀವಿಸಿದ್ದು ಒಂದು ದಿನ ಮಂತ್ರದ್ರಷ್ಟಾರ ಬ್ರಹ್ಮನಲ್ಲಿ ಲೀನವಾದ

ಆಧಾರ ಗ್ರಂಥ :

ಋಗ್ವೇದ ೧-೧೪೦-೧೬೪, ೧-೧೫೨-೬, ೧-೧೫೮-೧, ೧-೧೪೭-೩, ೪-೪-೧೩,೮-೯-೧೦

ಐತರೇಯ ಬ್ರಾಹ್ಮಣ ೮-೧೩.

ಬೃಹದ್ದೇವತಾ . ೧೧-೨೫

ಸವ್ಯಾಖ್ಯಾನ ಆರಣ್ಯಕ : ೨-೧೭.

ಟಿಪ್ಪಣಿ : ಪುರಾಣ ಮತ್ತು ಮಹಾಭಾರತದಲ್ಲಿ ದೀರ್ಘತಮನ ಕಥೆ ಬಂದಿದೆ. ಋಷಿಯು ತೇಲುತ್ತಾ ಅಂಗದೇಶಕ್ಕೆ ಹೋದ ಅವನನ್ನು ನೀರಿನಿಂದ ಮೇಲೆತ್ತಿದರು. ಅಂಗದೇಶದ ದಾಸಿ ಉಷಜಳಿಗೆ ಮಕ್ಕಳಿರಲಿಲ್ಲ ಪುತ್ರ ಕಾಮಿಯಾದ ಅವಳನ್ನು ರಾಜನು ಋಷಿಯಲ್ಲಿಗೆ ಕಳುಹಿಸಿದ ಋಷಿಯಿಂದ ಅವಳಿಗೆ ಕಕ್ಷೀವತ ಮುಂತಾದ ಮಕ್ಕಳಾದರು ಅಲ್ಲಿ ಋಷಿ ಸುಖದಿಂದ ಜೀವಿಸಿದ

ಋಗ್ವೇದದಲ್ಲಿ ಈ ಘಟನೆ ಇಲ್ಲ ಬೃಹದ್ದೇವತದಲ್ಲಿದೆ. ಋಗ್ವೇದ ಕಾಲದ ಆರ್ಯರಿಗೆ ಅಂಗದೇಶದ ಪರಿಚಯವಿರಲಿಲ್ಲ ಈ ಕಥೆಯನ್ನು ಕಾಲಾಂತರದಲ್ಲಿ ಪೂರ್ತಿ ಮಾಡಲು ಸೇರಿಸಿರಬಹುದು ಆದ್ದರಿಂದ ಅದನ್ನು ಇಲ್ಲಿ ಸೂಚಿಸಿಲ್ಲ

ಇಡಾ , ಋಗ್ವೇದದಲ್ಲಿ ದೇವೀ ರೂಪದಲ್ಲಿ ಉಲ್ಲೇಖವಿದೆ. ಹಸುವಿಗೆ ಪರ್ಯಾಯ ವಾಚಕವಾಗಿದೆ ಮನುವಿನ ಪುತ್ರಿ ಎಂದೂ ಹೇಳಿದೆ. ಇಲಾ ಎಂಬ ಹೆಸರಿನಿಂದಲೂ ಈ ಶಬ್ದ ಪ್ರಚಲಿತವಾಗಿದೆ

ಉಚ್ಚೈಃಥ್ಯ ; ಅಂಗಿರಸನ ಮಗ ಇವನ ತಾಯಿ ಸ್ವರಾಜ್ಯ. ಪತ್ನಿಯ ಹೆಸರು ಮಮತಾ.

ತ್ರೈತನ್ : ಒಬ್ಬ ಸೇವಕ ತ್ರಿತನ ಸಹಾಯಕ

ದೀರ್ಘತಮಸ : ಮಮತೆಯ ಮಗನಾದುದರಿಂದ ಇವನಿಗೆ ಮಾಮತೇಯ

ನೆಂದಾಯಿತು. ಇವನನ್ನು ಔಚಥ್ಯನೆಂದೂ ಕರೆಯುತ್ತಾರೆ. ಇವನು ಸೂಕ್ತ ದ್ರಷ್ಟಾ ಋಷಿ. ಮಂತ್ರಗಾಯಕ. ನೂರು ವರ್ಷ ಬದುಕಿದ್ದ.

**ಭಾರತೀ ,** ಒಬ್ಬ ದೇವತೆಯ ಪತ್ನಿ ಋಗ್ವೇದ ಕಾಲದಲ್ಲಿ ಸರಸ್ವತಿಗೂ ಈ ಶಬ್ದವನ್ನು ಪ್ರಯೋಗಿಸಿದ್ದಾರೆ.

**ಮಮತಾ :** ಉಚ್ಚಥ್ಯನ ಪತ್ನಿ. ದೀರ್ಘತಮನ ತಾಯಿ. ಕಾಲಾಂತರದಲ್ಲಿ ಮಹತ್ವದ ಅರ್ಥದಲ್ಲಿ ಇದನ್ನು ಪ್ರಯೋಗಿಸಿದ್ದರು.

**ವಿಷ್ಣು** · ವೇದದಲ್ಲಿ ಪ್ರಕಾಶ ಹಾಗೂ ಸೂರ್ಯನ ಮೂರ್ತ ರೂಪವೆಂದು ತಿಳಿದಿದ್ದಾರೆ. ವಿಶೇಷವಾಗಿ ಇವನ ಪದನ್ಯಾಸವು ವರ್ಣಿತವಾಗಿದೆ. ವೇದದಲ್ಲಿ ಇಂದ್ರನಿಗೆ ಸಹಾಯಕನೆಂದೂ ಹೇಳಿದೆ.

**ಬೃಹಸ್ಪತಿ** ವೈದಿಕ ಸಾಹಿತ್ಯದಲ್ಲಿ ಇವನೊಬ್ಬ ದೇವತೆ ಇವನನ್ನು ಉಪಾಸನೆ ಮತ್ತು ಪ್ರಾರ್ಥನೆಗೆ ಒಡೆಯನೆಂದು ಕರೆಯುತ್ತಾರೆ ಇವನು ಧೇವ ಪುರೋಹಿತ, ಪ್ರಜ್ಞೆಯ ದೇವತೆ ಇವನನ್ನು ಸದಸಸ್ಪತಿ, ಜ್ಯೇಷ್ಠರಾಜ ಹಾಗೂ ಗಣಪತಿ ಎಂಬ ಹೆಸರಿನಿಂದಲೂ ಕಾಣಬಹುದು ಇಂದ್ರನ ಜೊತೆ ಇವನ ಹೆಸರನ್ನು ಉಲ್ಲೇಖಿಸಿರುವುದು ವೇದನಲ್ಲಿ ಕಂಡುಬರುತ್ತದೆ ಬೃಹಸ್ಪತಿ ರೂಪದಲ್ಲಿ ವೇದದಲ್ಲಿ ೧೨೦ ಸಾರಿ ಬ್ರಾಹ್ಮಣ ಸ್ಪತಿ ‑ಪದಲ್ಲಿ ಸುಮಾರು ೫೦ ಸಾರಿ ಉಲ್ಲೇಖಗಳು ಕಾಣ ಬರುತ್ತವೆ.

**ಸರಸ್ವತೀ :** ಇಲ್ಲಿ ವಾಗ್ದೇವಿಯ ಅರ್ಥದಲ್ಲಿ ಈ ಶಬ್ದ ಪ್ರಯೋಗವಿದೆ.

**ಮಿತ್ರಾ ವರುಣ :** ವೇದದಲ್ಲಿ ಜೋಡಿ ಜೋಡಿಯಾಗಿ ಇವರ ಹೆಸರುಗಳು ಬಂದಿವೆ. ಅಗ್ನಿ ಪ್ರಜ್ವಲಿತವಾದಾಗ ಮಿತ್ರನೂ ಮತ್ತು ಹುಟ್ಟಿದಾಗ ವರುಣನೂ ಆಗುತ್ತಾರೆ ಮಿತ್ರನು ದಿನಕ್ಕೂ ವರುಣನು ರಾತ್ರಿಗೂ ದೇವತೆಗಳು

**ಮಿತ್ರಾ ,** ಇವನೊಬ್ಬ ವೈದಿಕ ದೇವತೆ ಮಿತ್ರನ ಉಲ್ಲೇಖ ವೇದದ ಒಂದು ಸೂಕ್ತದಲ್ಲಿ ಮಾತ್ರ ಕಂಡು ಬರುತ್ತದೆ. ಉಳಿದಿದ್ದು ಮಿತ್ರಾ ವರುಣರ ಜೊತೆಯಲ್ಲಿರುವುದನ್ನು ಕಾಣಬಹುದು ಪಾರಸೀ ಗ್ರಂಥದಲ್ಲಿ ಬರುವ ಮಿಥ್ರ ವೈದಿಕ ದೇವತೆ ಮಿತ್ರನಾಗಿದ್ದಾನೆ ಮಿತ್ರನು ಸೂರ್ಯನ ಸಂಬಂಧದ ಪ್ರಕಾಶಕ್ಕೆ ದೇವತೆ ಮಿತ್ರ ಅಂದರೆ ಜೊತೆಗಾರ ಆದ್ದರಿಂದ ವೇದದಲ್ಲಿ ಇವನನ್ನು ದಯಾಲು ವೆಂದೂ ವರ್ಣಿಸಿದ್ದಾರೆ ಶಾಂತಿದೇವತೆ ಎಂದು ಹೇಳಿದೆ. ಮಹಾ ಆದಿತ್ಯನೆಂದೂ ಹೇಳಿದೆ. ಮಾನವರಲ್ಲಿ ಏಕತೆಯನ್ನುಂಟುಮಾಡುತ್ತಾನೆ ಆಕಾಶ ಮತ್ತು ಪೃಥ್ವಿ ಯನ್ನು ಕಾಪಾಡುತ್ತಾನೆ.

**ವರುಣ :** ವೈದಿಕ ದೇವತೆ. ದೇವತೆಗಳಿಗೂ ಮಾನವರಿಗೂ ಇವನೇ ರಾಜ. ಸೂರ್ಯನೇ ಇವನ ಕಣ್ಣು ದೂರದರ್ಶಿಯೂ ಸಾವಿರ ಕಣ್ಣುಳ್ಳವನೂ ಆಗಿದ್ದಾನೆ ಇವನ ಮನೆ ಸ್ವರ್ಣಮಯ. ಇವನ ಗುಪ್ತಚಾರರೂ ಎರಡು ಲೋಕ ದಲ್ಲಿಯೂ ಸಂಚರಿಸುತ್ತಾರೆ. ಅವರಿಂದ ಇವನಿಗೆ ಪ್ರತಿದಿನ ಸಮಾಚಾರ ಬರುತ್ತದೆ.

ಇವನು ಜಲದೇವತೆ. ಸೃಷ್ಟಿಯ ಭೌತಿಕ ಹಾಗೂ ನೈತಿಕ ನಿಯಮಗಳನ್ನು ಪಾಲಿಸುವನಾಗಿದ್ದಾನೆ.

**ಸುಧನ್ವಾ ;** ಇವನು ಅಂಗಿರಸ ವಂಶದವನು. ಇವನ ಪುತ್ರರು ಹಾಗೂ ವಂಶದವರನ್ನು ಸಾಧನ್ವರು ಹಾಗೂ ಮಧನ್ವರೆಂದು ಋಗ್ವೇದದಲ್ಲಿ ಕರೆದಿದ್ದಾನೆ.

ಶ್ರೀ ಶ್ರೀ ಶ್ರೀ

# ಇಂದ್ರ ಮರುದ್ಗಣ ಮತ್ತು ಅಗಸ್ತ್ಯ

ಆಕಾಶದಲ್ಲಿ ಇಂದ್ರ ಸಂಚರಿಸುತ್ತಿದ್ದ ಒಮ್ಮೆ ಮರುತ್ತುಗಳ ಜೊತೆ ಕೆಳಗೆ ಬಂದ. ಮರುತ್ತುಗಳು ಕೆಳಗೆ ಬೀಳುವುದನ್ನು ನೋಡಿದ ಅವರನ್ನು ಸಂತೈಸಿದ

"ಮರುದ್ಗಣಗಳೇ ! ಯಾವ ಸೌಭಾಗ್ಯದಿಂದ ಸಮವಯಸ್ಕರಾಗಿದ್ದೀರಿ ? ಸಮಾನ ಸ್ಥಾನದಲ್ಲಿದ್ದೀರಿ ? ಒಂದೇ ರೀತಿ ಶೋಭಿಸುತ್ತಿದ್ದೀರಿ ಯಾವ ದೇಶದಿಂದ ಬಂದಿದ್ದೀರಿ ? ನಿಮ್ಮ ಅಭಿಪ್ರಾಯವೇನು ? ಮಳೆ ಬರಿಸುವ ನೀವು ಧನ ಪ್ರಾಪ್ತಿಗಾಗಿ ಶಕ್ತಿಯನ್ನು ಆರಾಧಿಸುತ್ತೀರಿ ತರುಣರೇ ಯಾವ ಹವಿಸ್ಸನ್ನು ಗ್ರಹಿಸುತ್ತೀರಿ? ತಮ್ಮನ್ನು ಯಾರು ಯಜ್ಞಕ್ಕೆ ಆಕರ್ಷಿಸುತ್ತಾರೆ? ಆಕಾಶದಲ್ಲಿ ಗಿಡುಗನಂತೆ ಸಂಚರಿಸುತ್ತಿರುವ ಮರುತ್ತುಗಳೇ ನಿಮ್ಮನ್ನು ಯಾವ ರೀತಿ ಸ್ತೋತ್ರಗಳಿಂದ ಸ್ತುತಿಸಬೇಕು" ಎಂದು ಕೇಳಿದ ಇಂದ್ರ

"ದೇವೇಂದ್ರನೆ ! ತಾವು ಗೌರವಿಸಲು ಅರ್ಹರಾದವರು ಒಂಟಿಯಾಗಿ ಎಲ್ಲಿಗೆ ಹೊರಟಿದ್ದೀರಿ ? ಇದಕ್ಕೆ ಏನು ಅರ್ಥ ? ನಾವು ನಿಮ್ಮನ್ನು ಹಿಂಬಾಲಿಸುತ್ತಿದ್ದೇವೆ ಸುಮಧುರ ಶಬ್ದಗಳಿಂದ ನೀವು ಹೇಳಬೇಕೆಂದಿರುವುದನ್ನು ನಮಗೆ ಹೇಳಿ."

"ಮರುದ್ಗಣಗಳೆ ತನ್ನ ವಜ್ರಾಯುಧವನ್ನು ನೋಡುತ್ತಾ ಸ್ತೋತ್ರ ಮತ್ತು ಸೋಮರಸದಿಂದ ನನಗೆ ಸುಖ ಸಿಗುತ್ತದೆ ಹವಿಸ್ಸು ನನಗಾಗಿಯೇ ಇದೆ. ನನ್ನ ಗುರಿ ನನ್ನ ವಜ್ರಾಯುಧ ಶತ್ರುಗಳನ್ನು ನೇರವಾಗಿ ನಿಗ್ರಹಿಸುತ್ತದೆ. ಮಾನವರು ನನ್ನನ್ನು ಪೂಜಿಸುತ್ತಾರೆ ಅವರ ಸ್ತುತಿಯು ನನಗೆ ತಲುಪಿಸುತ್ತದೆ. ನನ್ನ ಕುದುರೆ ನನ್ನ ಉಪಾಸಕ ನನ್ನ ಪೂಜಾ ಸ್ಥಳಕ್ಕೆ ಕೊಂಡೊಯ್ಯುತ್ತದೆ "

"ಇಂದ್ರ ನಾವು ನಮ್ಮ ಹಿರಿಮೆಯಿಂದ ಕೂಡಿದವರಾಗಿ ನಮ್ಮ ಕುದುರೆಗಳೊಂದಿಗೆ ಯುದ್ಧದ ಸಮೀಪ ತಮ್ಮ ಸೇವೆಗಾಗಿ ನಿಂತಿರುತ್ತವೆ. ತಾವು ನಮ್ಮ ಯಜ್ಞದ ಹವಿಸ್ಸನ್ನು ಸ್ವೀಕರಿಸುತ್ತೀರಿ" ಎಂದರು ಮರುತ್ತುಗಳು.

"ಮರುದ್ಗಣಗಳೆ! ನಿಮಗಾಗಿ ಇಟ್ಟಿರುವ ಯಜ್ಞೀಯ ಹವಿಸ್ಸು ಎಲ್ಲಿದೆ. ನಾನು ವೃತ್ರನನ್ನು ಸಂಹರಿಸಿದೆ. ಹವಿಸ್ಸು ಕೇವಲ ನನಗಾಗಿ ಇದೆ. ನಾನೂ ಶೂರ, ನನ್ನನ್ನು ಜಯಿಸಲು ಸಾಧ್ಯವಿಲ್ಲ. ನಾನು ಈ ವಜ್ರಾಯುಧದಿಂದ ಶತ್ರುಗಳನ್ನು ಜಯಿಸಿದ್ದೇನೆ" ಎಂದ ಇಂದ್ರ. "ಐಶ್ವರ್ಯವಂತನೆ! ತಾವು ಬಹಳ ಕರ್ಮಗಳನ್ನು ಮಾಡಿದ್ದೀರಿ. ಆದರೆ ಅದು ನಮ್ಮ ಒಕ್ಕೂಟದ ಫಲ ಬಲಶಾಲಿಯೇ ನಾವೂ ಕೂಡ ಬಹಳ ಕೆಲಸ ಮಾಡಿದ್ದೇವೆ. ನಾವು ನಮ್ಮ ಕರ್ಮದ ಮೂಲಕ ನಾವು ಮರುತ್ತುಗಳು"

"ಮರುದ್ಗಣಗಳೆ! ನಾನು ನನ್ನ ಪರಾಕ್ರಮದಿಂದ ನನ್ನ ಉಗ್ರವಾದ ಕ್ರೋಧ ದಿಂದ ವೃತ್ರನನ್ನು ಕೊಂದೆ. ನಾನು ವಜ್ರಧಾರಿ. ಪ್ರಾಣಿಗಳ ಹಿತಕ್ಕಾಗಿ ಮೃದುವಾಗಿ ಹರಿಯುವ ಜಲವನ್ನು ಸೃಷ್ಟಿಮಾಡಿದ್ದೇನೆ" ಎಂದು ಮರುತ್ತುಗಳ ಗರ್ವೋಕ್ತಿಗೆ ಉತ್ತರಿಸಿದ.

"ಮಘವನ್! ತಮಗಿಂತ ದೊಡ್ಡ ಶ್ರೀಮಂತರು ಯಾರು ಇದ್ದಾರೆ? ತಮಗೆ ಸಮಾನರಾದ ಬುದ್ಧಿವಂತ ದೇವತೆ ಯಾರಿದ್ದಾರೆ? ತಮ್ಮಿಂದ ಮಾಡಲ್ಪಟ್ಟ ಯಾವ ಕರ್ಮವೂ ನಿರರ್ಥಕವಾಗುವುದಿಲ್ಲ ತಮ್ಮಂತೆ ಹಿಂದೆ ಯಾರೂ ಹುಟ್ಟಿಲ್ಲ. ಈಗಲೂ ಯಾರೂ ಇಲ್ಲ." ಎಂದರು ಮರುತ್ತುಗಳು.

"ಮರುದ್ಗಣಗಳೇ! ನನ್ನ ಪರಾಕ್ರಮ ಎಲ್ಲೆಡೆ ಅಪ್ರತಿಹತವಾಗಿದೆ ಯಾವು ದನ್ನು ಯೋಚಿಸುತ್ತೇನೆಯೋ ಅದನ್ನು ತಕ್ಷಣ ಮಾಡುತ್ತೇನೆ. ನಾನು ಮೇಧಾವಿ, ಉಗ್ರಕರ್ಮವಾದಿ ಯಾವ ಉದ್ದೇಶಕ್ಕಾಗಿ, ಯಾವ ವಿಚಾರಕ್ಕಾಗಿ, ಯಾವ ದಿಕ್ಕಿಗೆ ಏಳುತ್ತೇನೆಯೋ ಅಲ್ಲಿ ನಾನು ಒಡೆಯ ಹಾಗೂ ಶಾಸಕನಾಗುತ್ತೇನೆ "

ಇಂದ್ರ ಹಾಗೂ ಮರುತ್ತುಗಳ ಮಾತುಕತೆಗಳು ಉಗ್ರವಾಗಿದ್ದವು. ಮರುತ್ತು ಗಳು ಇಂದ್ರನನ್ನು ಹೊಗಳಿದ್ದರಿಂದ ಪರಿಸ್ಥಿತಿ ಸ್ವಲ್ಪ ಸುಧಾರಿಸಿತು.

"ಮರದ್ಗಣಗಳೇ! ನಿಮ್ಮ ಸ್ತೋತ್ರ ನನಗೆ ಪ್ರಿಯವಾಗಿದೆ. ಎಲ್ಲರೂ ಇದನ್ನು ಮಾಡಬೇಕು. ನಾನು ನಿಮ್ಮ ಮಿತ್ರ ನಾನು ಬೇಕಾದುದನ್ನು ಕೊಡುವವ ನಾಗಿದ್ದೇನೆ." ಎಂದ ಇಂದ್ರ.

ಅಗಸ್ತ್ಯನು ತಪಸ್ಸು ಮಾಡುತ್ತಿದ್ದ ತಪಸ್ಸಿನ ಪ್ರಭಾವದಿಂದ ಇವರ ಸಂವಾದವನ್ನು ಕೇಳಿಸಿಕೊಂಡ ಇಂದ್ರ ಮತ್ತು ಮರುದ್ಗಣಗಳ ಎದುರಿಗೆ ಬಂದ ಅಗಸ್ತ್ಯ. ಅವನನ್ನು ನೋಡಿದರು. ಅಗಸ್ತ್ಯನು ಇಂದ್ರ ಮತ್ತು ಮರುತ್ತುಗಳಿಗೆ ವಂದಿಸಿದ. ಅವರು ಸಂತಸಗೊಂಡರು. ಅಗಸ್ತ್ಯ ಇವರ ಪರಸ್ಪರ ವೈಮನಸ್ಯ ನಾಶವಾಗಿರುವುದನ್ನು ಅರಿತ.

"ಮರುದ್ಗಣಗಳೆ! ಮನುಷ್ಯರು ನಿಮ್ಮನ್ನು ಸ್ತುತಿಸುತ್ತಾರೆ. ನಿಮ್ಮ ಮಿತ್ರರ ಹತ್ತಿರ ಜಾಗ್ರುತೆ ಹೋಗಿ. ಉತ್ತಮ ಧನ ಪ್ರಾಪ್ತಿಗಾಗಿ ಜನಗಳ ಕರ್ಮ ಮಾಡಲು ಉತ್ತೇಜಿಸಿ. ಮರುದ್ಗಗಣಗಳೆ ತಾವು ತಮ್ಮನ್ನು ಸ್ತುತಿಸುವವರ ಹತ್ತಿರ ಹೋಗಿ" ಎಂದ ಅಗಸ್ತ್ಯ.

ಅಗಸ್ತ್ಯನು ಇಂದ್ರನಿಗಾಗಿ ಒಂದು ಹವಿಸ್ಸನ್ನು ಸೃಷ್ಟಿಸಿದ. ಅನಂತರ ಇಂದ್ರನ ಸಮೀಪಕ್ಕೆ ಹೋದ. ಅಲ್ಲಿ ಮರುತ್ತುಗಳನ್ನು ಸ್ತೋತ್ರ ಮಾಡಿದ ಅನಂತರ ಇಂದ್ರನನ್ನು ಸ್ತುತಿಸಿದ ಇಂದ್ರ ಮತ್ತು ಮರುತ್ತುಗಳ ಮಧ್ಯೆ ಸಂಧಿ ಮಾಡಲು ಮರುತ್ತುಗಳಿಗೆ ಹವಿಸ್ಸನ್ನು ಕೊಡಲು ನಿಶ್ಚಯಿಸಿದ. ಅದನ್ನು ಇಂದ್ರನಿಗೆ ಕೊಡಬೇಕೆಂದಿದ್ದ.

ಅಗಸ್ತ್ಯನ ಭಾವನೆ ಇಂದ್ರನಿಗೆ ಅರ್ಥವಾಯಿತು ಇಂದ್ರನು ಅಗಸ್ತ್ಯನನ್ನು ಕುರಿತು.

"ಅಗಸ್ತ್ಯ! ಇಂದು ಅಥವಾ ನಾಳೆ ಏನೂ ಇಲ್ಲ ಯಾರ ಅಸ್ತಿತ್ವವೇ ಇರುವುದಿಲ್ಲವೋ ಅವರನ್ನು ಯಾರು ತಿಳಿಯುತ್ತಾರೆ ಅವರು ಆಲೋಚಿಸಿದ ವಿಷಯವನ್ನು ಮರೆತುಬಿಡುತ್ತಾರೆ"

"ಇಂದ್ರನೆ! ಮರುತ್ತುಗಳ ಜೊತೆ ನೀನೂ ಸಹ ಯಜ್ಞ ಭಾಗವನ್ನು ಸ್ವೀಕರಿಸು. ಮರುದ್ಗಣಗಳು ನಿನ್ನ ಸಹೋದರರು" ಎಂದು ಅಗಸ್ತ್ಯ ಹೇಳಿದ

"ಅಗಸ್ತ್ಯ! ನೀನು ನನ್ನ ಮಿತ್ರ. ಆದಾಗ್ಯೂ ನನಗೆ ಅನಾದರವನ್ನು ಏಕೆ ತೋರಿಸುತ್ತೀ? ನಿನ್ನ ಅಭಿಪ್ರಾಯ ನನಗೆ ಗೊತ್ತು ನೀನು ನಮಗೆ ಏನೂ ಕೊಡುವುದಿಲ್ಲ ವೆಂದು ಗೊತ್ತು."

"ವಜ್ರಿನ್! ತಾವು ಧನಕ್ಕೆ ಒಡೆಯರು. ಮಿತ್ರ ಪತಿಯೇ ನೀನು ಮಿತ್ರರಿಗೆ ಆಶ್ರಯದಾತನು ನೀನು ಮರುತ್ತುಗಳಿಗೆ ಸಮಾನ ನನ್ನ ಹವಿಸ್ಸನ್ನು ಸ್ವೀಕರಿಸು.

ಕೋಪಗೊಂಡಿದ್ದ ಇಂದ್ರನನ್ನು ಸಮಾಧಾನಪಡಿಸಿ ಅಗಸ್ತ್ಯನು ಋಷಿಗಳನ್ನು ಕುರಿತು—

"ಋತ್ವಿಜರೆ! ವೇದಿಕೆಯನ್ನು ಸಿದ್ಧಪಡಿಸಿ ಅಗ್ನಿಯನ್ನು ಪ್ರಜ್ವಲಿಸಿ. ಅಮೃತ ಸ್ವರೂಪ ಗುಣವುಳ್ಳ ಯಜ್ಞವನ್ನು ವಿಸ್ತರಿಸಿ" ಅಗಸ್ತ್ಯನ ಮಾತಿನಿಂದ ಇಂದ್ರ ಸಂತುಷ್ಟನಾದ ಅಗಸ್ತ್ಯನು ಮರುತ್ತುಗಳಿಗೆ ಹವಿಸ್ಸನ್ನು ಕೊಟ್ಟ ಸೋಮರಸವನ್ನು ಸಿದ್ಧಪಡಿಸಿದರು. ಇಂದ್ರನು ಮರುತ್ತುಗಳ ಸಂಗಡ ಸೋಮಪಾನ ಮಾಡಿದ ಅಗಸ್ತ್ಯ ಮರುತ್ತುಗಳನ್ನು ಸ್ತುತಿಸಿದ ಇಂದ್ರನನ್ನೂ ಸ್ತೋತ್ರ ಮಾಡಿದ ಎಲ್ಲಿ ಎಲ್ಲಿಗೆ ಮರತ್ತುಗಳೊಡನೆ ಇಂದ್ರ ಹೋದನೊ ಅಲ್ಲಿ ಅವನು 'ಮರುತ್ವತ್' ಆದನು

**ಆಧಾರ ಗ್ರಂಥ**

**ಋಗ್ವೇದ** ೧-೧೬೫-೧೪-೧೫, ೧-೬೬೭೧, ೧-೧೬೬-೧೧೬೮, ೧-೧೬೭-೧, ೧೯೯, ೧-೧೭೦-೧-೪.

**ಬೃಹದ್ದೇವತಾ;** ೪-೪೬-೫೫.

**ಟಿಪ್ಪಣಿ:** ವೇದದಲ್ಲಿ ಈ ಕಥೆಯು ಸುಂದರವಾಗಿ ನಿರೂಪಿತವಾಗಿದೆ ಅಗಸ್ತ್ಯನು ಇಂದ್ರ ಮತ್ತು ಮರುತ್ತುಗಳಿಗೆ ಸಂಧಿಮಾಡಿಸಿದ

# ಲೋಪ ಮುದ್ರಾ ಅಗಸ್ತ್ಯ

ವಸಂತ ಕಾಲದ ಮಂದ ಮಾರುತ ಬೀಸುತ್ತಿತ್ತು. ನಾನಾ ಬಣ್ಣದ ಹೂವುಗಳು ಸಾಲು ಸಾಲಾಗಿ ಅರಳಿ ಸುಗಂಧವನ್ನು ಹೊರ ಹೊಮ್ಮಿಸುತ್ತಿದ್ದವು. ವಾಯು ಮಂಡಲವೆಲ್ಲಾ ಸುಗಂಧಮಯವಾಗಿತ್ತು. ಚೇತನಕ್ಕೆ ಸ್ಫೂರ್ತಿ ಕೊಡುತ್ತಿತ್ತು. ಮನಸ್ಸು ಚಂಚಲವಾಗಿ ವಿಹರಿಸುತ್ತಿತ್ತು. ಇದು ವಸಂತ ಸಖನ ಆಗಮನವನ್ನು ಸೂಚಿಸುತ್ತಿತ್ತು. ಚೇತನಗಳಲ್ಲಿ ಸ್ಪರ್ಶ ಸುಖವನ್ನು ಅನುಭವಿಸುವ ಇಚ್ಛೆ ಉಂಟಾಗುತ್ತಿತ್ತು. ವಸಂತ ಭೈರವಿಯಲ್ಲಿ ಹೃದಯ ರಾಗವನ್ನು ಲೋಪಮುದ್ರಾ ಕೇಳಿದಳು ಸಿರೀಶ ಪುಷ್ಪಗಳಿಗಿಂತಲೂ ಮೃದು ಸುಖಾನುಭವಗಳನ್ನು ಅನು ಭವಿಸತೊಡಗಿದಳು. ವಸಂತ ಕಾಲದ ವಾಯು ಅವಳನ್ನು ಸ್ಪರ್ಶಿಸುತ್ತಿತ್ತು. ಅವಳಲ್ಲಿ ಸ್ಪರ್ಶಸುಖವನ್ನು ಅನುಭವಿಸಬೇಕೆಂಬ ಅಭಿಲಾಶೆ ಜಾಗ್ರುತವಾಯಿತು. ಅಂಗ ಸ್ಪರ್ಶ ಮಾಡಬೇಕೆಂಬ ಆಸೆ ಚಿಗುರಿತು. ಸೀತೋಷ್ಣ ವಾಯು ಸ್ಪರ್ಶದ ಆಲೋಚನೆಯಲ್ಲಿ ದ್ದಳು. ಬೇರೆಯವರ ಉಷ್ಣ ಉಚ್ವಾಸದಿಂದ ಅವಳ ಕೆಂಪಾದ ಕೆನ್ನೆಗಳು ಅದ್ರಿತ ವಾಗಲೆಂಬ ಕಲ್ಪನೆಯಲ್ಲಿದ್ದಳು.

ಬುದ್ಧಿವಂತನ ಬುದ್ಧಿಗೆ ಒಂದು ಎಲ್ಲೆ ಉಂಟು ಕಲ್ಪನೆಗೂ ಒಂದು ಕೊನೆ ಉಂಟು ಜ್ಞಾನದ ಎಲ್ಲೆಯನ್ನು ಬುದ್ಧಿ ನಿರ್ಧರಿಸುತ್ತದೆ ಕಲ್ಪನೆಯ ಎಲ್ಲೆಯನ್ನು ಮನಸ್ಸು ನಿರ್ಧರಿಸುತ್ತದೆ ಮನಸ್ಸಿಗೆ ಎಲ್ಲೆ ಇಲ್ಲ ಕಲ್ಪನೆಗೂ ಕೊನೆ ಇಲ್ಲ. ಬುದ್ಧಿಗೆ ಎಲ್ಲೆ ಉಂಟು ಎಲ್ಲಿಯಾದರೂ ಒಂದು ಕಡೆ ಹೋಗಿ ನಿಲ್ಲುತ್ತದೆ. ಜ್ಞಾನವೂ ತನ್ನ ಎಲ್ಲೆಯವರೆವಿಗೆ ಹೋಗಿ ನಿಂತುಬಿಡುತ್ತದೆ.ಆದರೆ ಆ ಎಲ್ಲೆಯನ್ನು ದಾಟಿ ಕಲ್ಪನೆ ಮುಂದೆ ಹೋಗುತ್ತದೆ. ಅದು ಪಕ್ಷಿಯಂತೆ ಹಾರಿಹೋಗಲು ಸಾಧ್ಯವಿಲ್ಲ ಪಕ್ಷಿಯು ಯಾವ ಕಡೆ ಹಾರಿ ಹೋಗಲು ಸಾಧ್ಯವಿಲ್ಲವೋ ಆ ಕಡೆ ಜ್ಞಾನಪ್ರಕಾಶವು ಮುಟ್ಟಲು ಸಾಧ್ಯವಿಲ್ಲ. ಆ ಸ್ಥಳವನ್ನು ದಾಟಿ ಹೋಗಿ ಹಾರಾಡುತ್ತದೆ ಮನಸ್ಸು

ಅಗಸ್ತ್ಯನನ್ನು ಯೌವನವು ತ್ಯಜಿಸಿತು ಅವನು ಬೌದ್ಧಿಕವಾಗಿ ಬೆಳದಿದ್ದ ಪರ್ವತವನ್ನೂ ಸ್ತಂಭಿಸುವ ಶಕ್ತಿ ಅವನಲ್ಲಿತ್ತು. ಆದರೆ ಕಾಮ ವೇಗದಲ್ಲಿ ಅವೂ ಸಹ ಹಾರಿ ಹೋಗಿತ್ತು. ಕಲ್ಪನೆ, ಮನಸ್ಸಿನ ಆಲೋಚನೆಯನ್ನು ನಿಯಂತ್ರಿಸಲು ಅಸಮರ್ಥವಾಗಿತ್ತು. ಅದರ ಪ್ರವಾಹದಲ್ಲಿ ತೇಲಿ ಹೋಗುತ್ತದೆ ಮನಸ್ಸು. ಅದರಲ್ಲಿ ಒಂದಾಗುತ್ತದೆ. ಎಲ್ಲವೂ ಮರೆತು ಹೋಗುತ್ತದೆ ಮನಸ್ಸು ವೇಗವತಿ ಯಾಗುತ್ತದೆ. ಪಾಕ ನಿಪುಣನು ಒಳ್ಳೆಯ ರುಚಿಕರವಾದ ಅಡಿಗೆ ಮಾಡಿ ಅದರ ವಾಸನೆಗೆ ಮುಗ್ಧನಾಗುವಂತೆ ಮನಸ್ಸು ತಾನು ಸೃಷ್ಟಿಸಿದ ಕಲ್ಪನೆಯಲ್ಲಿ ಸುಖವನ್ನು ಕಾಣುತ್ತದೆ.

ತಪೋವೃದ್ಧನೂ ವಯೋವೃದ್ಧನೂ ಆದ ಅಗಸ್ತ್ಯನನ್ನು ಚಂಚಲವಾದ ಲೋಪಮುದ್ರೆಯ ಕಣ್ಣುಗಳು ಕಾಮವಾಸನೆಯಿಂದ ನೋಡಿದವು. ಅಗಸ್ತ್ಯನಲ್ಲಿ ಕಾಮವನ್ನು ಕಂಡವು. ರತಿಲೋಲುಪಳಾದ ಲೋಪಮುದ್ರೆಯು ಕಾಮನನ್ನು ಕೂಡಲು ಹೊರಟಳು. ವಸಂತಜಯಘೋಷ ಮಾಡಿದ. ಅಗಸ್ತ್ಯನು ಆ ನಾರಿಯನ್ನು ನೋಡಿದ.

ರೂಪ ಆಕರ್ಷಣೆಯನ್ನುಂಟುಮಾಡುವುದು ರೂಪದ ಪ್ರಯೋಜನವೇ ಇದು. ಇದಕ್ಕೆ ಪ್ರಕೃತಿಯು ಸಹಕರಿಸಿತು. ಅನುಕೂಲವಾದ ವಾತಾವರಣವನ್ನುಂಟುಮಾಡಿತು. ಪ್ರಕೃತಿಯು ನರನಾರಿಯರನ್ನು ಸೃಷ್ಟಿಸಿತು. ಅದು ಕಾಮ ಮತ್ತು ರತಿಯನ್ನು ಮಾಡಿತು. ಅವರಲ್ಲಿ ಆಕರ್ಷಣೆಯನ್ನುಂಟುಮಾಡಿತು. ಸೌಂದರ್ಯವನ್ನುಂಟುಮಾಡಿತು. ಪರಸ್ಪರ ಸೇರುವಂತೆ ಮಾಡಿತು. ಮಿಲನಸುಖವನ್ನುಂಟುಮಾಡಿತು. ಅದರ ಫಲವೇ ಸಂತಾನ.

ಋತುಸ್ನಾನ ಮಾಡಿಕೊಂಡು ಗಜಗಾಮಿನಿಯಂತೆ ಕೀರ್ತಿಮತಿಯಾದ ನಾರೀ ಲೋಪಮುದ್ರೆಯು ಬರುವುದನ್ನು ಅಗಸ್ತ್ಯನ ಪವಿತ್ರ ನೇತ್ರಗಳು ನೋಡಿದವು.

"ಮಾನ್ಯರೆ ! ಈ ವಯಸ್ಸಿನಲ್ಲಿಯೂ ತಮ್ಮ ಸೇವೆಯನ್ನು ಮಾಡುತ್ತಾ ಇದ್ದೇನೆ" ಎಂದು ನಾರೀ ಸಹಜವಾದ ನಾಚಿಕೆಯಿಂದ ಲೋಪಮುದ್ರೆ ಹೇಳಿದಳು. ಕಾಮಾಭಿಲಾಷೆಯಿಂದ ತರುಣಿಯ ಕೋಮಲ ಕಪೋಲಗಳು ಕೆಂಪಾಗಿರುವುದನ್ನು ಅಗಸ್ತ್ಯ ನೋಡಿದ

"ಸುಮೇಧಸ್! ಮುಪ್ಪು ಶರೀರ ಸೌಂದರ್ಯವನ್ನು ನಾಶಮಾಡುತ್ತದೆ ಅದು ಆಯುಸ್ಸನ್ನು ಕುಡಿಯುತ್ತಾ ಹೋಗುತ್ತದೆ." ಎಂದು ವಸಂತ ಮಾರುತದಿಂದ ವಕ್ಷಸ್ಥಲದಿಂದ ಸರಿದು ಹೋಗುತ್ತಿರುವ ವಸ್ತ್ರವನ್ನು ಹಿಡಿದುಕೊಳ್ಳುತ್ತಾ ಲೋಪಮುದ್ರೆ ಹೇಳಿದಳು. "ಹೌದು" ಎಂದು ಮುಪ್ಪಾದ ತನ್ನ ಶರೀರವನ್ನೊಮ್ಮೆ ನೋಡಿಕೊಂಡ

"ಔರ್ವಶೇಯ! ಗೃಹಸ್ಥಧರ್ಮವನ್ನು ಪಾಲಿಸಲಿಕ್ಕಾಗಿ ಯೌವನ ಕಾಲವಿರುವುದು. ಪತಿ ಪತ್ನಿಯರ ಕೂಡುವಿಕೆಯೇ ಇದರ ಗುರಿ, ಇದೇ ಧರ್ಮ" ಎಂದು ನಮ್ರಭಾವದಿಂದ ಹೇಳಿದಳು.

ಲೋಪಮುದ್ರೆಯು ಪ್ರಗಲ್ಭಳಾದಳು ಕಾಮಯೋಚನೆಯಲ್ಲಿದ್ದಳು ಮಾತನಾಡುತ್ತಲೇ ಇರುವ ಲೋಪಮುದ್ರೆಯನ್ನು ನೋಡಿದ ಅಗಸ್ತ್ಯ. ತಪಸ್ಸಿನಿಂದ ಶುಷ್ಕವಾಗಿರುವ ಅಗಸ್ತ್ಯನ ಹೊಳೆಯುತ್ತಿರುವ ಕಣ್ಣುಗಳನ್ನು ತನ್ನ ನಿರ್ಮಲವಾದ ಕಣ್ಣುಗಳಿಂದ ನೋಡುತ್ತಾ—

"ಮೈತ್ರಾವರುಣಿ! ಪ್ರಾಚೀನ ಋಷಿಗಳು ದೇವತೆಗಳೊಡನೆ ಸತ್ಯ ನುಡಿಯುತ್ತಿದ್ದರು ಆದರೂ ಕ್ಷಯಿಸಿದರು ಜೀವನದಲ್ಲಿ ಪಡೆಯಬೇಕಾದುದನ್ನು ಪಡೆದು ಅನುಭವಿಸಬೇಕಾಗಿದ್ದ ಫಲವನ್ನು ಅನುಭವಿಸಲು ಅಸಮರ್ಥರಾದರು" ಎಂದಳು.

"ಶುಭಾನನೆ! ನಿನ್ನ ಮನೋಭಿಲಾಶೆ ನನಗೆ ಅರ್ಥವಾಯಿತು" ಎಂದು ಮೃದುಸ್ವರದಲ್ಲಿ ಹೇಳಿದ.

"ಕುಂಭಜನೆ ! ಸಂಯುಮಶೀಲರು, ವಿದ್ಯಾಧ್ಯಯನ ಶೀಲರು, ಜ್ಞಾನಿಗಳು, ವಿದ್ವಾಂಸರು ಅವಕಾಶವಿದ್ದಾಗ ಪತಿ ಪತ್ನಿ ಭಾವದಿಂದರುತ್ತಾರೆ. ಅವರಲ್ಲಿಯೂ ಕಾಮಭಾವನೆ ಉಂಟಾಗುತ್ತದೆ" ಎಂದಳು

"ಸುಶ್ರೋಣಿ, ಕಾಮ ಪ್ರಕೃತಿ ಗುಣ" ಎಂದ. ಅಗಸ್ತ್ಯನ ಸ್ವರದಲ್ಲಿ ಮನ್ಮಥ ಪ್ರವೇಶ ಮಾಡಿದ್ದ

ಸಿಂಧು ಶಾಸನಿ !

ಅನುಕೂಲಕರ ಪತ್ನಿಯನ್ನು ಪಡೆದು ಪ್ರಜೋತ್ಪತ್ತಿಯನ್ನು ಮಾಡುತ್ತಾನೆ. ಇಲ್ಲದೇ ಇದ್ದರೆ ಜಗತ್ತಿನ ಸೃಷ್ಟಿ ಹೇಗೆ ಸಾಧ್ಯ" ಎಂದು ತನ ಕಾಮನೆ ಸಿದಿ ಸಿದನ್ನು ತಿಳಿದು ಹೇಳಿದಳು

"ತನ್ವಿ! ನಮ್ಮ ಪ್ರಯತ್ನಗಳು ವ್ಯರ್ಥವಾಗಲಿಲ್ಲ ದೇವತೆಗಳು ನಮ್ಮನ್ನೂ ರಕ್ಷಿಸುತ್ತಾರೆ ನಾವು ಸ್ಪರ್ಧಾಶೀಲರಾಗಿ ನೂರಾರು ಪ್ರಯತ್ನಗಳನ್ನು ಮಾಡುತ್ತೇವೆ" ಎಂದು ಕಾಮದೃಷ್ಟಿಯಿಂದ ಲೋಪಮುದ್ರೆಯ ಅರಳಿದ ಮುಖಕಮಲವನ್ನು ನೋಡಿ ಹೇಳಿದ ಅಗಸ್ತ್ಯ

ಲೋಪಮುದ್ರೆಗೆ ಸಂತೋಷವಾಯಿತು. ಅವಳ ನಗುಮುಖವನ್ನು ನೋಡಿ ನಗುತ್ತಾ—

"ಪ್ರಿಯೆ! ನಾವು ನರನಾರಿರೂಪದಲ್ಲಿ ಸ್ತ್ರೀಪುರುಷರ ರೂಪದಲ್ಲಿ ಪತಿ ಪತ್ನಿ ರೂಪದಲ್ಲಿ ಗೃಹಸ್ಥಧರ್ಮವನ್ನು ಪಾಲಿಸೋಣ" ಎಂದು ಹೇಳಿದ ಅಗಸ್ತ್ಯ

ರತಿಯು ಕಾಮನನ್ನು ಪಡೆದು ನಕ್ಕಳು ಮುಡಿಯಲ್ಲಿ ಸಿಕ್ಕಿಸಿದ್ದ ವಾಸಂತೀ ಕುಸುಮವು ಭೂಮಿಯಲ್ಲಿಬಿದ್ದಿತು ಮುಡಿ ಬಿಚ್ಚಿಕೊಂಡಿತು ಉಟ್ಟಿದ್ದ ಬಟ್ಟೆ ಹಾರಾಡಿತು. ಋಷಿಯ ಮನಸ್ಸು ಕುಚಗಳ ಮಧ್ಯೆ ಲೀನವಾಯಿತು

"ಗುರುಗಳೆ!" ಅಗಸ್ತ್ಯ ಮತ್ತು ಲೋಪಮುದ್ರೆಯ ಎದುರಿಗೆ ತಲೆ ಬಾಗಿಸಿದ ಶಿಷ್ಯನು ನಮಸ್ಕರಿಸಿದ.

"ಶಿಷ್ಯನೆ ! ಏನು ಸಮಚಾರ ಹೇಳು?" ಅಗಸ್ತ್ಯನು ನಗುತ್ತಾ ಕೇಳಿದ ಅವನ ತಪೋಬಲದಿಂದ ಮಾನವೀಯ ಭಾವನೆ ಅವನಲ್ಲಿ ಮೂಡಿತ್ತು.

ನಾಚಿಕೆಯಿಂದ ಶಿಷ್ಯ ತಲೆಬಾಗಿಸಿದ್ದ ಅವನು ಹೇಳಬೇಕೆಂದಿದ್ದರೂ ಹೇಳಲಾಗಲಿಲ್ಲ ಋಷಿಯು ಅವನನ್ನು ಪ್ರೋತ್ಸಾಹಿಸುತ್ತಾ—

"ಹೇಳು ವತ್ಸ" ಎಂದ

ಪತಿಪತ್ನಿಯರಿಗೆ ತಲೆಬಾಗಿ ನಮಸ್ಕರಿಸಿ "ನಾನು ಪಾಪ ಮಾಡಿದ್ದೇನೆ" ಎಂದ ಶಿಷ್ಯ

"ಪಾಪ" ಋಷಿಯು ಆಶ್ಚರ್ಯದಿಂದ ಪ್ರಶ್ನಿಸಿದ.

"ಹೌದು"

"ಹೇಗೆ"?

"ನಾನು ನಿಮ್ಮ ಸಂಭೋಗ ಸಲ್ಲಾಪವನ್ನು ಕೇಳಿದೆ ನಾನು ಪಾಪ ಮಾಡಿದ್ದೇನೆ. ನಾನು ಬ್ರಹ್ಮಚಾರಿ, ಕೇಳಬಾರದಿತ್ತು" ಎಂದು ಶಿಷ್ಯನು ಋಷಿ ಮತ್ತು ಋಷಿ ಪತ್ನಿಯರ ಕಾಲಮೇಲೆ ಬಿದ್ದ. ಪ್ರಣಯ ರಹಸ್ಯ ಬಯಲಾದುದಕ್ಕೆ ಅವಳು ನಾಚಿದಳು. ಅನಂತರ. ಸರಿಯಾದಳು.

"ಮಹಾತ್ಮರೆ! ನನ್ನಿಂದ ತಪ್ಪಾಗಿದೆ ನಾನು ದೋಷಿ ಮರಣಾ ಸನ್ನನಾದ ಮನಷ್ಯನಿಗೆ ಅನೇಕ ಇಚ್ಛೆಗಳು ಉಂಟಾಗುತ್ತವೆ ನನ್ನನ್ನು ಕ್ಷಮಿಸಿ ಗುರುಗಳೆ!"

ಋಷಿಯು ಸಿಟ್ಟಾಗಲಿಲ್ಲ ಏಕದೃಷ್ಟಿಯಿಂದ ಶಿಷ್ಯನನ್ನು ನೋಡತೊಡಗಿದ ಲೋಪಮುದ್ರೆಯು ಪ್ರೀತಿಯನ್ನು ಪ್ರಕಟಿಸುತ್ತಾ—

"ಮಗು! ನೀನು ಯಾವ ಪಾಪವನ್ನೂ ಮಾಡಿಲ್ಲ. ನಿನ್ನ ವಿಚಾರ ದೂಷಿತವಾದುದಲ್ಲ"

"ಪ್ರಿಯೆ! ನಿನ್ನ ವಿಚಾರ ಸರಿಯಾಗಿದೆ ಇವನು ಪಾಪರಹಿತ" ಶಿಷ್ಯನ ಕಣ್ಣಲ್ಲಿ ಧಾರಾಕಾರವಾಗಿ ಕಣ್ಣೀರು ಹರಿಯುತ್ತಿತ್ತು ಆ ಅಶ್ರುಬಿಂದುವಿನಲ್ಲಿ ಪ್ರಾಯಶ್ಚಿತ್ತದ ಪವಿತ್ರ ರೇಖೆಯನ್ನು ಋಷಿ ಕಂಡ

"ಮಗು! ನೀನು ಪಾಪರಹಿತನು" ಎಂದು ಋಷಿ ಹೇಳಿದ ಸೂಕ್ತ ದ್ರಷ್ಟೆಯಾದ ಲೋಪಮುದ್ರೆಯು ಪ್ರೀತಿವ[illegible]ದ ಶಿಷ್ಯನನ್ನು ಎಬ್ಬಿಸಿ ಆಲಂಗಿಸಿಕೊಂಡಳು ಅವನ ಮಸ್ತಕವನ್ನು ಚುಂಬಿಸಿದಳು.

"ವತ್ಸ! ನೀನು ಪ್ರಶಂಸನೀಯ" ಎಂದಳು ಸೂಕ್ತದ್ರಷ್ಟಾ ಅಗಸ್ತ್ಯನು ಎದ್ದು ನಿಂತು ಶಿಷ್ಯನನ್ನು ಪತ್ನಿ ಕರೆದು ಅವನ ಮಸ್ತಕವನ್ನು ಚುಂಬಿಸಿದ

"ಶಿಷ್ಯ! ನೀನು ಪವಿತ್ರಾತ್ಮನು' ಎಂದು ಹೇಳಿದ

ಆಧಾರ ಗ್ರಂಥ

**ಋಗ್ವೇದ** ೧-೭೯-೧೨, ೧-೭೯-೬೪, ೧-೭೯-೫೬, ೧-೧೧-೧೧, ೧-೧೬೫-೧೩-೧೫, ೧-೧೬೬-೧೬೯ ೧-೧೭೦-೨-೫, ೧-೧೭೧-೧೭೮, ೧-೧೭೭-೫, ೧-೧೭೯, ೧-೧೮೦-೧೯೦ ೧೯೧, ೧-೧೮೨-೧, ೧-೧೮೪, ೧-೧೮೫-೧೦ ೧-೧೮೯, ೭-೩೩-೧೩, ೧೦-೮೦-೮'

**ತೈತ್ತಿರೀಯ ಬ್ರಾಹ್ಮಣ .** ೧-೭-೧೧-೧,
**ತೈತ್ತಿರೀಯ ಸಂಹಿತಾ** ೭-೫-೫-೨,
**ಮೈತ್ರಾಯಣೀ ಸಂಹಿತಾ :** ೨-೧-೮,
**ಕಾಠಕ ಸಂಹಿತಾ ·** ೧೦-೧೧,
**ಪಂಚವಿಂಶತಿ ಬ್ರಾಹ್ಮಣ .** ೧೨-೧೪-೫,
**ಐತರೇಯ ಬ್ರಾಹ್ಮಣ .** ೫-೧೬,
**ಕೌಶೀತಕೀಯ ಬ್ರಾಹ್ಮಣ :** ೨೯-೯

**ಜೈಮಿನೀಯ ಉಪನಿಷತ್ ಬ್ರಾಹ್ಮಣ ೪-೧೫ ೧-೧೯-೧,**
**ಬೃಹದ್ದೇವತಾ ೪-೫೭-೬೧,**

**ಟಿಪ್ಪಣಿ:** ಕಾಮ ಎಂಬುದು ಪ್ರಾಣಿಗಳಿಗೆ ಪ್ರಕೃತಿ ಜನ್ಯವಾದುದು ಕಾಮದಿಂದಲೇ ಪ್ರಾಣಿಗಳು ಗರ್ಭಧರಿಸುತ್ತವೆ ಕಾಮವಿಲ್ಲದಿದ್ದರೆ ಸೃಷ್ಟಿಯೇ ಇಲ್ಲ ಜಗತ್ತಿನ ಸೃಷ್ಟಿಯೇನಾದರೂ ನಿಂತರೆ ಜಗತ್ತಿನ ಕ್ರಿಯೆ, ಇಲ್ಲದಂತಾಗುತ್ತದೆ. ನಮ್ಮ ಇರುವಿಕೆಗೇ ಲೋಪ ಬರುತ್ತದೆ ಕಾಮದಲ್ಲಿ ನಿಷ್ಕಾಮುಕತೆ ಇರಬೇಕು ಅದು ದೂಷಿತವಾದರೆ ದೂಷಿತ ಕರ್ಮಗಳನ್ನು ಮಾಡುತ್ತದೆ

ಈ ಕಥೆಯಲ್ಲಿ ಮಾನಸಿಕ ಹಾಗೂ ಶರೀರದ ಅಪರಾಧದ ಮೇಲೆ ಬೆಳಕನ್ನು ಚೆಲ್ಲಲಾಗಿದೆ ಶಿಷ್ಯನು ತನ್ನ ಅಪರಾಧವನ್ನು ಒಪ್ಪಿಕೊಂಡಿದ್ದಾನೆ ಅವನು ಮಾನಸಿಕವಾಗಿ ಅಪರಾಧವನ್ನು ತನ್ನ ದೃಷ್ಟಿಯಲ್ಲಿ ಮಾಡಿದ್ದ ಅದಕ್ಕೆ ಶಿಕ್ಷೆಯನ್ನು ಅನುಭವಿಸಲು ಇಚ್ಛಿಸಿದ ಋಷಿ ಅಗಸ್ತ್ಯ ಮತ್ತು ಲೋಪಮುದ್ರೆ ಅದನ್ನು ಅಪರಾಧವೆಂದು ತಿಳಿಯಲಿಲ್ಲ ಇದು ಆ ಸಮಯದ ಸಾಮಾಜಿಕ ವ್ಯವಹಾರ ಹಾಗೂ ಆಚರಣೆಯ ರೀತಿಯನ್ನು ತೋರಿಸಿರುತ್ತದೆ ಶಾರೀರಕ ಹಾಗೂ ಮಾನಸಿಕ ಅಪರಾಧಗಳು, ಅಪರಾಧವೆಂದು ತಿಳಿಯುತ್ತಿದ್ದರು. ಮಾನಸಿಕ ಅಪರಾಧಿಯೂ ದಂಡವನ್ನು ಅನುಭವಿಸಬೇಕಾಗಿತ್ತು

ಆಧುನಿಕ ನ್ಯಾಯ ಶಾಸ್ತ್ರದಲ್ಲಿ ಎಲ್ಲಿನವರೆವಿಗೆ ಪ್ರತ್ಯಕ್ಷ ರೂಪದಲ್ಲಿ ಅಪರಾಧವು ಸಿದ್ಧವಾಗುವುದಿಲ್ಲವೋ ಅಲ್ಲಿನವರೆವಿಗೆ ಅದು ಅಪರಾದವಾಗುವುದಿಲ್ಲ ವೈದಿಕ ಕಾಲದ ನ್ಯಾಯಕ್ಕೂ ಈಗಿನ ಕಾಲದ ನ್ಯಾಯಕ್ಕೂ ಇರುವ ಭೇದ ಇದೆ

**ಅಗಸ್ತ್ಯ** ಅವನು ಮಾನವನಾಗಿದ್ದ ಮಾನ ಮಾನ್ಯ ಹಾಗೂ ಮಾನಾರ್ಯನೆಂದೂ ಕರೆಯುತ್ತಿದ್ದರು. ಮಿತ್ರಾವರುಣರ ಮಗನಾಗಿದ್ದರೆಂಬ ಉಲ್ಲೇಖ ಸಿಕ್ಕುತ್ತದೆ ಸಾಯಣರು ಇವರನ್ನು ಖೇಲರಾಜನ ಪುರೋಹಿತರೆಂದು ಹೇಳಿದ್ದಾರೆ. ಇವರನ್ನು ಸುಮೇಧಸ ಎಂದು ಕರೆದಿದ್ದಾರೆ.

**ಲೋಪಮುದ್ರಾ** ಅಗಸ್ತ್ಯನ ಪತ್ನಿ

ಶ್ರೀ ಶ್ರೀ ಶ್ರೀ

# ಗೃತ ಸ್ಮದ

ವೈನ್ಯನ ಯಜ್ಞ ನಡೆಯುತ್ತಿತ್ತು ಅಗ್ನಿಯ ಜ್ವಾಲೆಗಳು ಹವಿಸ್ಸನ್ನು ಸ್ವೀಕರಿಸುತ್ತಿದ್ದವು. ಸ್ವಾಹಾಕಾರ ಧ್ವನಿಯು ಯಜ್ಞಮಂಟಪದಲ್ಲಿ ತುಂಬಿತ್ತು. ಯಜ್ಞದಲ್ಲಿ ಬೇರೆ ಬೇರೆ ದೇವತೆಗಳೊಡನೆ ಇಂದ್ರನೂ ಉಪಸ್ಥಿತನಿದ್ದ.

ದೈತ್ಯರು, ದಾನವರು ಮತ್ತು ಅಸುರರು ಇಂದ್ರನ ವಿರೋಧಿಗಳಾಗಿದ್ದರು ಇಂದ್ರನಿಗೆ ಅವಮಾನ ಮಾಡಲು ಯುದ್ಧದಲ್ಲಿ ಸೋಲಿಸಲು ಅವನಿಗೆ ತೊಂದರೆ ಕೊಡಲು ಛಿದ್ರಮಾರ್ಗಾನ್ವೇಷಿಗಳಾಗಿದ್ದರು ವೈನನ ಯುಜ್ಞದಲ್ಲಿ ಅನ್ಯದೇವತೆಗಳೊಡನೆ ಇಂದ್ರನಿರುವುದು ತಿಳಿಯಿತು ಈ ಅವಕಾಶವನ್ನು ಉಪಯೋಗಿಸಿಕೊಳ್ಳಲು ಆಲೋಚಿಸಿದರು. ಇಂದ್ರನೊಡನೆ ಯುದ್ಧ ಮಾಡಲು ಸಾಧ್ಯವೋ ಅಥವಾ ಇಲ್ಲವೋ ಅದು ಬೇರೆಯ ಮಾತು ಯಜ್ಞಕ್ಕೆ ಅಡ್ಡಿ ಮಾಡುವುದು ಅತ್ಯಾವಶ್ಯಕವಾಗಿತ್ತು ಯಜ್ಞ ಸಮಾಪ್ತಿಯಾಗುವುದರಲ್ಲಿತ್ತು.

ಯಜ್ಞದಲ್ಲಿ ಮಂತ್ರದ್ರಷ್ಟಾರ ಗೃತ್ಸಮದ ಋಷಿಯೂ ಇದ್ದ ಅವನಿಗೆ ದೈತ್ಯರ ಆಕ್ರಮಣದ ಅರಿವಾಯಿತು ಇಂದ್ರನನ್ನು ವಧೆಮಾಡಲು ಬರುವುದು ಅವನಿಗೆ ತಿಳಿಯಿತು ದೈತ್ಯರು ಇಂದ್ರನನ್ನು ಕೊಲ್ಲಲು ಮುನ್ನುಗ್ಗಿದರು.

ಗೃತಸ್ಮದನಿಗೆ ಒಂದು ಉಪಾಯ ಹೊಳೆಯಿತು ಅವನು ಇಂದ್ರನಂತೆ ರೂಪ ಧರಿಸಿದ ದೈತ್ಯರಿಗೆ ಇಂದ್ರನನ್ನು ಗುರುತಿಸುವುದು ಕಷ್ಟವಾಯಿತು. ಇದನ್ನರಿತ ಗೃತಸ್ಮದನು ಯಜ್ಞಮಂಟಪದಿಂದ ಓಡಿದ ಗೃತಸ್ಮದನೇ ನಿಜವಾದ ಇಂದ್ರನೆಂದು ಭಾವಿಸಿ ನಿಜವಾದ ಇಂದ್ರನನ್ನು ಬಿಟ್ಟು ದೇಶಾಂತರಿಯ ಬೆನ್ನು ಹತ್ತಿದರು ಜ್ಯೋತಿರ್ಲೋಕ, ಆಕಾಶ ಲೋಕ ಹಾಗೂ ಭೂಲೋಕಗಳಲ್ಲಿ ಅವನನ್ನು ಕೊಲ್ಲಲು ಓಡಾಡಿದರು ದೈತ್ಯರ ಅಭಿಪ್ರಾಯ ಸ್ಪಷ್ಟವಾಗಿ ಗೋಚರಿಸಿತು ಹಿಡಿದು ಕೊಲ್ಲುವುದೇ ಅವರ ಗುರಿಯಾಗಿತ್ತು. ಋಷಿ ತಪ್ಪಿಸಿಕೊಳ್ಳುತ್ತಲೇ ಇದ್ದ ಕೊನೆಯಲ್ಲಿ ಸಿಕ್ಕಿ ಬಿದ್ದ ಅವನ ಮೇಲೆ ದೈತ್ಯರು ಆಕ್ರಮಣ ಮಾಡಿದರು. ಋಷಿ ಸಂಕಟದಲ್ಲಿ ಸಿಕ್ಕಿ ಬಿದ್ದ. ಅವನ ಮೃತ್ಯು ಆಸನ್ನವಾಯಿತು "ರಾಕ್ಷಸರೆ ! ನಾನು ಇಂದ್ರನಲ್ಲ" ಎಂದು ಜೋರಾಗಿ ಕೂಗಿಕೊಂಡ ಹಾಗಾದರೆ ಯಾರು ನೀನು? ಎಂದು ಕೇಳಿದರು ದೈತ್ಯರು.

"ನಾನು ಗೃತಸ್ಮದ" ಹೆದರಿಕೆಯಿಂದ ನಡುಗುತ್ತಾ ಹೇಳಿದ.

"ಇಂದ್ರನೆಲ್ಲಿದ್ದಾನೆ ?" ಅವನ ಮೇಲೆ ಕ್ರೂರ ದೃಷ್ಟಿ ಬೀರುತ್ತಾ ಕೇಳಿದರು,

"ನಾನು ಇಂದ್ರನಲ್ಲ ನಿಮಗೆ ಇಂದ್ರ ಗೊತ್ತಿಲ್ಲವೆ ? ಅವನು ಮಹಾ ತೇಜಸ್ವಿ" ಎಂದು ಧೈರ್ಯದಿಂದ ಹೇಳಿದ.

"ಇಂದ್ರ" ದೈತ್ಯರು ಆಶ್ಚರ್ಯಪಟ್ಟರು .

"ಹೌದು, ಅವನು ಪರಮವೀರ. ಅವನ ಕಾರ್ಯಗಳ ಪರಿಚಯು ನಿಮಗಿಲ್ಲವೋ" ಗೃತಸ್ಮದನು ಆವರ ಆಶ್ಚರ್ಯದ ಲಾಭ ಪಡೆದ.

'ಇಲ್ಲ' ಅವನ ಮೇಲೆ ದೃಷ್ಟಿ ಇಟ್ಟರು ದೈತ್ಯರು

"ತಾವು ತಿಳಿಯಲು ಅಪೇಕ್ಷಿಸುತ್ತೀರೋ ?"

"ಹೌದು" ಎಂದು ಆಸಕ್ತಿಯನ್ನು ತೋರಿಸಿದರು.

'ಕೇಳಿ' ಎಂದು ಹೇಳಲು ಪ್ರಾರಂಭಿಸಿದ

"ಅವನು ತನ್ನ ಶಕ್ತಿಯನ್ನು ಪ್ರಕಟಿಸುತ್ತಾ ಮಾನವರಿಗೆ ಅಗ್ರಗಣ್ಯನಾಗಿದ್ದಾನೆ. ತನ್ನ ಶೌರ್ಯದಿಂದ ದೇವತೆಗಳು ಶೋಭಿಸುವಂತೆ ಮಾಡಿದ್ದಾನೆ ಆಕಾಶ ಮತ್ತು ಭೂಮಿ ಅವನನ್ನು ಕಂಡು ನಡುಗುತ್ತಿವೆ ನಡುಗುತ್ತಿದ್ದ ಭೂಮಿಯನ್ನು ದೃಢವಾಗಿ ನಿಲ್ಲುವಂತೆ ಮಾಡಿದ್ದಾನೆ ಕೋಪಗೊಂಡ ಪರ್ವತವನ್ನು ಸ್ಥಿರಗೊಳಿಸಿದ್ದಾನೆ ಆಕಾಶದ ಸಹಾಯದಿಂದ ಅಂತರಿಕ್ಷವನ್ನು ನಿರ್ಮಿಸಿದ್ದಾನೆ ವೃತ್ರನನ್ನು ಕೊಂದಿದ್ದಾನೆ ನದಿಗಳಲ್ಲಿ ಪ್ರವಾಹ ಬರದಂತೆ ಮಾಡಿದ್ದಾನೆ. ರಾಕ್ಷಸರಿಂದ ಅಪಹರಿಸಲ್ಪಟ್ಟ ಗೋವುಗಳನ್ನು ಮುಕ್ತಗೊಳಿಸಿದ್ದಾನೆ ಮೇಘಗಳಿಂದ ವಿದ್ಯುತ್ತನ್ನು ಉತ್ಪಾದಿಸಿದ್ದಾನೆ. ಯುದ್ಧದಲ್ಲಿ ಶತ್ರುಗಳನ್ನು ನಾಶ ಮಾಡಿದ್ದಾನೆ. ಈ ಸಂಸಾರವನ್ನು ರಚಿಸಿದ್ದಾನೆ ದರೋಡೆಕೋರರನ್ನು ಗುಹೆಯಲ್ಲಿ ಬಂಧಿಸಿಟ್ಟಿದ್ದಾನೆ ಶತ್ರುಗಳನ್ನು ಜಯಿಸಿ ಅವರ ಸಂಪತ್ತನ್ನು ಅಪಹರಿಸಿದ್ದಾನೆ ಅವನ ವಿಷಯವಾಗಿ ಜನರು ಚರ್ಚಿಸುತ್ತಾರೆ. ಅವನನ್ನು ಸ್ತುತಿಸುತ್ತಾರೆ "

ಧುನಿ ಮತ್ತು ಚುಮುರಿಗಳು ಋಷಿಯ ವಾಕ್ಯಗಳಿಂದ ಪ್ರಭಾವಿತರಾದರು. ಅವರ ಉತ್ಸಾಹವು ಕಡಿಮೆಯಾಗುತ್ತಿರುವುದನ್ನು ಋಷಿಯು ಗಮನಿಸಿದ. ಧೈರ್ಯವಾಗಿ ಇಂದ್ರನ ವಿಚಾರವನ್ನು ಹೇಳತೊಡಗಿದ.

"ದರಿದ್ರ ಯಾಚಕರಿಗೂ ಸ್ತುತಿಪಾಠಕರಿಗೂ ಹಣ ಕೊಡುತ್ತಿದ್ದ ಜಲ ಪ್ರೇರಕ ಇಂದ್ರ. ಕುದುರೆ, ಹಸು ಗ್ರಹರಥಗಳ ಪ್ರೇರಕನಾಗಿದ್ದಾನೆ. ಯಜ್ಞಕ್ಕೆ ಶತ್ರು ಮಿತ್ರರಾದಿಯಾಗಿ ಎಲ್ಲರೂ ಇವನನ್ನು ಆಹ್ವಾನಿಸುತ್ತಾರೆ. ಪಾಪಿಗಳನ್ನು ಸಂಹರಿಸುತ್ತಾನೆ ಅಕರ್ಮಿಗಳನ್ನು ನಾಶಮಾಡುತ್ತಾನೆ. ಸ್ವಾಭಿಮಾನಿಗಳಿಗೆ ಸಿದ್ಧಿಯನ್ನು ಉಂಟುಮಾಡುತ್ತಾನೆ. ದುಷ್ಟರನ್ನು ಧ್ವಂಸ ಮಾಡುವವನೇ ಇಂದ್ರ

ಗೃತಸ್ಮದನಿಂದ ಇಂದ್ರನ ಪ್ರತಾಪವನ್ನು ಕೇಳಿ ರಾಕ್ಷಸರ ಹೃದಯದಲ್ಲಿ ಭಯ ಹುಟ್ಟಿತು. ಭಯಭೀತರಾದರು ಅವರ ಸ್ಥಿತಿಯನ್ನು ನೋಡಿ ಋಷಿ ಉತ್ಸಾಹಿಯಾದ. ಮತ್ತೆ ಇಂದ್ರನ ಶೌರ್ಯವನ್ನು ಹೊಗಳತೊಡಗಿದ.

ಭೂಮಿಯಲ್ಲಿ ಅಡಗಿದ್ದ ಶಂಬರನನ್ನು ಕೊಂದ. ಮಹಾಬಲಿ ಸರ್ಪವನ್ನು ಕೊಂದ. ರೋಹಿಣಿಯನ್ನು ತಡೆದ ಇಂದ್ರನನ್ನು ನೋಡಿ ಪರ್ವತಗಳು ನಡುಗುತ್ತಿವೆ ಆಕಾಶವು ಅವನಿಗೆ ನಮಸ್ಕರಿಸುತ್ತದೆ. ಪೃಥ್ವಿಯೂ ವಂದಿಸುತ್ತದೆ. ಸೋಮಪಾನ ಮಾಡುತ್ತಾನೆ ಬಲಿಷ್ಠವಾದ ಶರೀರವನ್ನು ಹೊಂದಿದ್ದಾನೆ. ಕೈಯಲ್ಲಿ

ವಜ್ರಾಯುಧವಿದೆ. ಸೋಮರಸವನ್ನು ತಯಾರು ಮಾಡುವವರನ್ನು ರಕ್ಷಿಸುತ್ತಾನೆ. ಅವನನ್ನು ಪ್ರಶಂಸಿಸಿದರೆ ಆಹಾರವನ್ನು ಕೊಡುತ್ತಾನೆ. ಪುರೋಡಾಶವನ್ನು ಸಿದ್ಧ ಪಡಿಸುವವರನ್ನು ಸನ್ಮಾನಿಸುತ್ತಾನೆ. ಮಹಾ ವಿದ್ಯುತ್ತಿಗೆ ಸಮಾನವಾದ ತೇಜಸ್ಸುಳ್ಳ ವನು. ಅವನಿಗೆ ಕಿರಣಗಳಿವೆ. ಅಪೇಕ್ಷಿಸಿದಾಗ ಮಳೆಗರೆಯುತ್ತಾನೆ. ಸಪ್ತ ನದಿ ಗಳನ್ನು ಹರಿಯುವಂತೆ ಮಾಡುತ್ತಾನೆ. ಸೋಮರಸವನ್ನು ಸಿದ್ಧಪಡಿಸುವವರಿಗೆ ಅನ್ನವನ್ನು ಕೊಡುತ್ತಾನೆ ಸತ್ಯಸ್ವರೂಪ ಇಂದ್ರ. ನಾವು ಎಲ್ಲರೂ ಇಂದ್ರನನ್ನು ಸ್ತುತಿಸುತ್ತೇವೆ."

ಇಂದ್ರನ ಐಶ್ವರ್ಯ ಮತ್ತು ಶೌರ್ಯವನ್ನು ಕೇಳಿ ದೈತ್ಯರಿಗೆ ಭಯ ಹುಟ್ಟಿತು. ಭಯದಿಂದಲೇ ಹೇಡಿಗಳಾದರು ನೈತಿಕ ಬಲವಿಲ್ಲದವರನ್ನು ಸೋಲಿಸು ವುದು ಸುಲಭ. ಅವರನ್ನು ನಿಗ್ರಹಿಸಲು ವಜ್ರ ಹಿಡಿದು ಇಂದ್ರ ಅಲ್ಲಿಗೆ ಬಂದ. ಅರ್ಥಜೀವಿಗಳಂತಿರುವ ರಾಕ್ಷಸರನ್ನು ವಧಿಸಲು ಇದೇ ಸರಿಯಾದ ಸಮಯವೆಂದು ತಿಳಿದ. ಅವರು ಆಲೋಚಿಸಲು ಅವಕಾಶ ಕೊಡಲಿಲ್ಲ. ವಿಳಂಬಿಸದೇ ಅವರ ಮೇಲೆ ಬಿದ್ದ. ವಜ್ರಾಘಾತದಿಂದ ಅವರ ಪ್ರಾಣಪಕ್ಷಿಗಳು ಹಾರಿಹೋದವು.

"ಋಷಿಗಳೇ ! ತಾವು ನನ್ನ ಸ್ನೇಹಿತರಿಗೆ ಸಮಾನರಾದವರು" ಎಂದು ಕೃತಜ್ಞತೆ ಯನ್ನು ಸಮರ್ಪಿಸುತ್ತಾ ಹೇಳಿದ.

"ಸುರೇಶ್ವರ ! ತಮ್ಮ ಅನುಗ್ರಹದಿಂದ" ವಿನಮ್ರತೆಯಿಂದ ಹೇಳಿದ ಋಷಿ.

"ಮಹಾತ್ಮರೆ ! ತಾವು ನನಗೆ ಪ್ರಿಯರು ತಾವು ನನ್ನನ್ನು ಪ್ರೀತಿಯಿಂದ ಕಾಣಿರಿ" ಎಂದು ಪ್ರಸನ್ನನಾಗಿ ಹೇಳಿದ ಇಂದ್ರ.

"ಶಕ್ರ ! ತಮ್ಮ ಪ್ರೀತಿ ಪಾತ್ರರಾಗಲು ಯಾರು ತಾನೆ ಇಚ್ಛಿಸುವುದಿಲ್ಲ' ಎಂದ ಋಷಿ.

"ಋಷಿಗಳೆ ! ವರವನ್ನು ಕೇಳಿ" ಉತ್ಸಾಹದಿಂದ ಹೇಳಿದ ಇಂದ್ರ.

ಗೃತಸ್ಮದನು ವಿಚಾರಕ್ಕೊಳಗಾದ ಅವನನ್ನು ಪ್ರೋತ್ಸಾಹಿಸುತ್ತಾ "ಗೃತಸ್ಮಿತರೆ! ವರವನ್ನು ಕೇಳಿ ನನಗೆ ಸಂತೋಷವಾಗುತ್ತದೆ." ಇಂದ್ರ ಹೇಳಿದ

"ಶಚೀಪತೆ ! ತಾವು ಶರೀರ ಹಾಗೂ ಹೃದಯಂಗಮವಾಗುವ ವಾಣಿಯನ್ನು ಅನುಗ್ರಹಿಸಿ."

"ಮತ್ತೆ" ಇಂದ್ರ ವಿಚಾರ ಮಾಡಿದ

"ಆ ವಾಣಿಯು ರಕ್ಷಿತವಾಗಲಿ "

"ಆಗಲಿ" ಎಂದ ಇಂದ್ರ. ಮತ್ತೆ ಪ್ರೋತ್ಸಾಹಿಸಿದ

"ನಾವು ವೀರರಾಗಲಿ, ಸಂಪತ್ತಿನಿಂದ ಕೂಡಿರುವವರಾಗಲಿ, ಪ್ರಸಿದ್ಧಿವಂತ ರಾಗಲಿ. ಸೌಭಾಗ್ಯವನ್ನು ದಾನಮಾಡಿ ತಮ್ಮ ಧನ ವೃದ್ಧಿಸಲಿ. ನಮ್ಮ ವಾಣಿ ಮಧುರವಾಗಲಿ ನಮ್ಮ ಶರೀರದ ರಕ್ಷಣೆಯಾಗಲಿ ನಮ್ಮ ಜೀವಿತ ದಿನಗಳು ಸುಖಮಯವಾಗಲಿ."

ಋಷಿಗಳೆ ! ಮತ್ತೆ ಏನಾದರೂ..."ನಗುತ್ತಾ ಕೇಳಿದ.

"ಇಂದ್ರ ನಮ್ಮ ವಿಚಾರಗಳಿಂದ ನಿಮ್ಮನ್ನು ಧ್ಯಾನಿಸುತ್ತೇವೆ. ನಾವು ನಮ್ಮ ಪ್ರತಿ ಜನ್ಮದಲ್ಲೂ ಸ್ಮರಿಸುತ್ತೇವೆ ನಮ್ಮಿಂದ ದೂರವಾಗಬೇಡಿ."

"ಮತ್ತೆ..."

"ಸುರೇಂದ್ರ ! ತಾವು ಸರ್ವ ಶ್ರೇಷ್ಠಾಧಿಕರು ಶ್ರೇಷ್ಠ ಅಶ್ವಾರೋಹಿಗಳು, ನಿಮಗೆ ಸರಿಸಮಾನರೂ ಯಾರೂ ಇಲ್ಲ "

"ಋಷಿ ನಿಮ್ಮ ಎಲ್ಲಾ ವರಗಳನ್ನು ಸ್ವೀಕರಿಸಿದ್ದೇನೆ ತಮ್ಮ ಅಪೇಕ್ಷೆಗಳು ಪೂರ್ಣವಾಗುತ್ತವೆ." ಎಂದ ಇಂದ್ರ.

ಇಂದ್ರನು ಪ್ರೀತಿಯಿಂದ ಗೃತಸ್ಮದನ ಬಲಗೈಯನ್ನು ಹಿಡಿದುಕೊಂಡ, ಋಷಿಯು ಇಂದ್ರನ ಮೈತ್ರಿಯನ್ನು ನೋಡಿ ಮುಗ್ಧನಾದ ಋಷಿಯೂ ಇಂದ್ರನ ಹಸ್ತವನ್ನು ಹಿಡಿದುಕೊಂಡ ಇಬ್ಬರೂ ಸ್ನೇಹದಿಂದ ಇಂದ್ರಲೋಕಕ್ಕೆ ಹೋದರು. ಇಂದ್ರನು ತನ್ನ ಮನೆಯಲ್ಲಿ ಗೃತಸ್ಮದನನ್ನು ಸತ್ಕರಿಸಿದ ಅವನನ್ನು ಪೂಜಿಸಿದ. "ಶ್ರೇಷ್ಠ ಋಷಿಗಳೆ ! ತಾವು ನನ್ನನ್ನು ಸ್ತುತಿಸಿ ಸಂತೋಷಗೊಳಿಸುತ್ತೀರಿ " ಇಂದ್ರನ ಆದರ ಸತ್ಕಾರಗಳಿಂದ ಋಷಿ ಮುಗ್ಧನಾಗಿ ತಲೆ ಬಾಗಿಸಿದ

ಋಷಿಗಳೆ ! ತಾವು ಶುನಹೋತ್ರನ ಮಕ್ಕಳು ಆದ್ದರಿಂದ ತಮ್ಮ ಹೆಸರು ಗೃತಸ್ಮದನೆಂದಾಯಿತು " ಗೃತಸ್ಮದನು ಇಂದ್ರನಿಗೆ ವಂದಿಸಿದ ಅನಂತರ ಇಂದ್ರನನ್ನು ಸ್ತುತಿಸತೊಡಗಿದ

"ಇಂದ್ರನೇ ನನ್ನ ಸ್ತೋತ್ರವನ್ನು ಕೇಳು. ನನ್ನನ್ನು ಯಾವಾಗಲೂ ಅರ್ಥ ರಹಿತನನ್ನಾಗಿ ಮಾಡಬೇಡಿ ನಾವು ನಿಮ್ಮಿಂದ ಧನವನ್ನು ಪಡೆಯಲು ಅರ್ಹರು ನಿರಂತರ ಹವಿಸ್ಸನ್ನು ಕೊಟ್ಟು ಸಿರಿಯನ್ನು ಯಾಚಿಸುತ್ತೇವೆ ಅದು ನಿಮ್ಮನ್ನು ವೃದ್ಧಿಸಲಿ. ಸುರೇಂದ್ರ ! ನೀವು ಸುರಿಸಿದ ಜಲಪ್ರವಾಹದ ಮೇಲೆ ರಾಕ್ಷಸರ ಅಸುರ ವೃತ್ತ ಆಕ್ರಮಣ ಮಾಡಿದ್ದ ಜಲಪ್ರವಾಹವನ್ನು ತಡೆದಿದ್ದ ನೀವು ಆ ಜಲವನ್ನು ಮುಕ್ತಗೊಳಿಸಿದಿರಿ. ವೃತ್ರನು ತಾನು ಅಮರನೆಂದು ತಿಳಿದಿದ್ದ ಆದರೆ ತಾವು ಅವನನ್ನು ಧರಾಶಾಯಿಯನ್ನಾಗಿ ಮಾಡಿದಿರಿ ನಿಮ್ಮ ಸ್ತೋತ್ರಗಳು ಜ್ಯೋತಿರ್ಮಯಗಳಾಗುತ್ತವೆ ಯಜ್ಞದಲ್ಲಿ ಪ್ರಕಾಶಕ್ಕೆ ಬರುತ್ತವೆ ವಜ್ರಹನ್ ! ಸ್ತೋತ್ರ ಮಾಡಿ ನಿಮ್ಮ ಶಕ್ತಿಯನ್ನು ವೃದ್ಧಿಸುತ್ತೇವೆ ನೀವು ಶತ್ರುಗಳನ್ನು ಸೂರ್ಯನಂತೆ ತಮ್ಮ ತೇಜಸ್ಸಿನಿಂದ ನಾಶ ಮಾಡುತ್ತೀರಿ ವಜ್ರಬಾಹು ! ಗುಹೆಯಲ್ಲಿ ಬಚ್ಚಿಟ್ಟು ಕೊಂಡು ತನ್ನ ಅದ್ಭುತ ಶಕ್ತಿಯಿಂದ ಅಂತರಿಕ್ಷ ಹಾಗೂ ಆಕಾಶವನ್ನು ಚಕಿತಗೊಳಿಸಿದ್ದ ನೀವು ಅವನನ್ನು ತಮ್ಮ ವಜ್ರದಿಂದ ವಧಿಸಿದಿರಿ ನಿಮ್ಮ ಕೀರ್ತಿಯನ್ನು ಹಾಡುತ್ತೇವೆ. ನಿಮ್ಮ ಹೊಸ ಹೊಸ ಕರ್ಮಗಳನ್ನು ಹೊಗಳುತ್ತೇವೆ, ತಮ್ಮ ಕುದುರೆ ಜಲಮೇಘದಂತೆ ಕೆನೆಯುತ್ತದೆ ಸಮತಲ ಭೂಮಿಯು ಮೇಘ ಗರ್ಜನೆಯಿಂದ ಪ್ರಸನ್ನವಾಗುತ್ತದೆ ಮೇಘಗಳು ಮಳೆ ಸುರಿಸಿ ಶೋಭೆಯನ್ನುಂಟು

ಮಾಡುತ್ತವೆ ಅಂತರಿಕ್ಷದಲ್ಲಿ ಜಲದಿಂದ ಕೂಡಿದ ಮೇಘಗಳು ಅಲಂಕಾರ ಪ್ರಾಯ ವಾಗಿ ಸಂಚರಿಸುತ್ತವೆ ಮರುತ್ತುಗಳು ಅವುಗಳನ್ನು ಎಲ್ಲಾ ಕಡೆ ಹರಡುತ್ತವೆ ಸಂಚರಿಸುವ ಮೇಘಗಳಲ್ಲಿ ಅಡಗಿದ್ದ ವೃತ್ರನನ್ನು ಕೊಂದಿರಿ. ನಿಮ್ಮ ವಜ್ರಾಘಾತ ದಿಂದ ಆಕಾಶ ಮತ್ತು ಭೂಮಿ ನಡುಗುತ್ತದೆ.

ವೃತ್ರನನ್ನು ಕೊಲ್ಲಲು ಅಪೇಕ್ಷಿಸಿದಿರಿ. ತಮ್ಮ ವಜ್ರ ಘರ್ಜಿಸಿತು ನೀವು ಸೋಮಪಾನ ಮಾಡಿದಿರಿ. ಅನಂತರ ಅವನ ಮಾಯೆಯನ್ನು ನಾಶ ಮಾಡಿದಿರಿ. ಪುರಂದರನೆ! ನೀವು ಈ ಪೀಡಾ ರಹಿತವಾದ ಸೋಮವನ್ನು ಕುಡಿಯಿರಿ ಸೋಮನು ನಿಮಗೆ ಸ್ಫೂರ್ತಿಯನ್ನು ಕೊಡಲಿ. ಅದರಿಂದ ತಮ್ಮ ಜಠರ ತುಂಬಲಿ. ನಿಮಗೆ ತೃಪ್ತಿ ಸಿಗಲಿ.

ಇಂದ್ರ! ನಿಮ್ಮ ಹೃದಯದಲ್ಲಿ ನಮಗೆ ಸ್ಥಾನ ಸಿಗಲಿ ಕರ್ಮ ಫಲಕ್ಕಾಗಿ ಯಜ್ಞವನ್ನು ಮಾಡುತ್ತೇವೆ ನಿಮ್ಮ ಆಶ್ರಯವನ್ನು ಅಪೇಕ್ಷಿಸಿ ಸ್ತೋತ್ರ ಮಾಡು ತ್ತೇವೆ ನಿಮ್ಮಿಂದ ಕೊಡಲ್ಪಟ್ಟ ಧನ ಶೀಘ್ರವಾಗಿ ತಲಪಲಿ." ಋಷಿಯು ಅಲ್ಲಿಯೇ ಇದ್ದ ಬೃಹಸ್ಪತಿಯನ್ನು ನೋಡಿದ ಅವನಿಗೆ ನಮಸ್ಕರಿಸಿ ಸ್ತೋತ್ರ ಮಾಡಿದ.

"ಬ್ರಹ್ಮಣಸ್ಪತೆ! ದೇವತೆಗಳಲ್ಲಿ ನೀನು ದೊಡ್ಡವನು ಕವಿಗಳಲ್ಲಿ ಶ್ರೇಷ್ಠ. ನಿನ್ನ ಅನ್ನ ಸರ್ವೋತ್ತಮವಾದುದು ಪ್ರಕಾಶಿಸುವವರಲ್ಲಿ ನೀನು ಶ್ರೇಷ್ಠ ಸ್ತೋತ್ರ ಗಳಿಗೆ ನೀನು ಸ್ವಾಮಿ ನೀನು ನಾವು ಮಾಡುವ ಯಜ್ಞಕ್ಕೆ ದಯಮಾಡಿಸು. ನಿನ್ನನ್ನು ಆಹ್ವಾನಿಸುತ್ತೇವೆ ಬ್ರಹ್ಮಣಸ್ಪತೆ! ನೀನು ರಾಕ್ಷಸರ ವಿಧ್ವಂಸಕ. ದೇವತೆ ಗಳು ಯಜ್ಞ ಭಾಗವನ್ನು ನಿನಗೆ ಅರ್ಪಿಸುತ್ತಾರೆ ಸೂರ್ಯನಲ್ಲಿ ರಶ್ಮಿಗಳು ಪ್ರಕಾಶಿಸು ವಂತೆ ನಿನ್ನಲ್ಲಿ ಸ್ತೋತ್ರಗಳು ಪ್ರಕಟಗೊಳ್ಳುತ್ತವೆ ಬ್ರಹ್ಮಣಸ್ಪತೆ! ನಿಂದಕರನ್ನು ಮತ್ತು ಅಹಂಕಾರಿಗಳನ್ನು ಸಂಹರಿಸು ನೀನು ಹವಿಸ್ಸನ್ನು ಕೊಂಡೊಯ್ಯುವವರನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುತ್ತೀ ಅವರನ್ನು ಪಾಪಗಳಿಂದ ರಕ್ಷಿಸುತ್ತೀ ಸ್ತುತಿಸದವರನ್ನು ದಂಡಿಸುತ್ತೀ ಕ್ರೋಧಿಗಳನ್ನು ನಾಶ ಮಾಡುತ್ತೀ." ಅನಂತರ ಇಂದ್ರ ಮತ್ತು ಬ್ರಹ್ಮಣಸ್ಪತಿಯನ್ನು ಕೂಡಿ ಸ್ತುತಿಸಿದ. "ಇಂದ್ರ ಬೃಹಸ್ಪತಿಗಳೇ! ನೀವು ಧನವಂತರು ಎಲ್ಲಾ ಸಂಪತ್ತಿಗೂ ತಾವಿಬ್ಬರೇ ಒಡೆಯರು. ನಿಮ್ಮ ಅಭಿಪ್ರಾಯವನ್ನು ಯಾರೂ ತಡೆಯಲಾರರು ನಾವು ಹವಿಸ್ಸನ್ನು ಅರ್ಪಿಸುತ್ತೇವೆ. ನೀವು ಬನ್ನಿ"

ಅನಂತರ ಗೃತ್ಸಮದನು ಬೇರೆ ಬೇರೆ ದೇವತೆಗಳನ್ನು ಸ್ತುತಿಸಿದ. ಅವನ ಸ್ತೋತ್ರ ಪೂರ್ಣವಾಗುವುದನ್ನು ಕಂಡು ಇಂದ್ರನು ಪುನಃ ತನ್ನ ಶಕ್ತಿಯನ್ನು ಕೇಳಲು ಇಚ್ಛಿಸಿದ ಕಪಿಂಜಲ ಪಕ್ಷಿಯ ರೂಪ ತಾಳಿದ ಇಂದ್ರನಿಲ್ಲದಿದ್ದುದನ್ನು ತಿಳಿದು ಋಷಿ ಹೊರ ಹೋಗಲು ಸಿದ್ಧನಾದ ಋಷಿ ಹೊರ ಬರುವುದನ್ನು ಪಕ್ಷಿರೂಪಿ ಇಂದ್ರ ನೋಡಿದ ಋಷಿಯನ್ನು ಕರೆದ ಋಷಿಗೆ ಆಶ್ಚರ್ಯವಾಯಿತು. ಪರಿಚಿತ ಧ್ವನಿ ಬಂದ ಕಡೆ ನೋಡಿದ ಅಲ್ಲಿ ಮುಪ್ಪಾದ ಕಪಿಂಜಲ ಪಕ್ಷಿ ಇತ್ತು ದಿವ್ಯ

ಜ್ಞಾನದಿಂದ ಪಕ್ಷಿಯನ್ನು ಗುರುತಿಸಿದ. ಅದು ಇಂದ್ರನೇ ಆಗಿತ್ತು. ಋಷಿಯು ಸ್ತುತಿಸಿದ. ಯಾವಾಗಲೂ ಭವಿಷ್ಯವನ್ನು ಹೇಳುವ ಕಪಿಂಜಲನೇ ಆಗಿದ್ದೀಯೆ. ನಿನಗೆ ಮಂಗಳವಾಗಲಿ. ಎಲ್ಲಿಯೂ ಪರಾಜಯವಿಲ್ಲ

ಗೃತ್ಸ (ಪ್ರಾಣ) ಮದ (ಆಕಾಶ) ಇವೆರಡೂ ಸೇರಿ ಶರೀರಧಾರಿಯಾದ ಗೃತಸ್ಮದನು ಇಂದ್ರನಿಗೆ ವಂದಿಸಿದ.

## ಆಧಾರ ಗ್ರಂಥ

ಋಗ್ವೇದ ೨–೧, ೨–೨೩ ೨–೪–೯, ೨–೧೨–೧೧–೧, ೨–೧೮–೬ ೨–೧೯–೧೮ ೨–೨೧೬, ೨–೨೩–೨೬, ೨–೨೪–೧೨ ೨–೨೯–೮, ೩–೪೧–೯.

ಐತರೇಯ ಬ್ರಾಹ್ಮಣ ೫–೨–೪,

ಐತರೇಯ ಅರಣ್ಯಕ ೨–೨–೧,

ಕೌಶೀತಕೀಯ ಬ್ರಾಹ್ಮಣ ೨೮–೨

ಬೃಹದ್ದೇವತಾ, ೪೯೫–೭೫

**ಟಿಪ್ಪಣಿ**, ಪ್ರಾಣ ಮತ್ತು ಅಪಾನ ವಾಯು ಶರೀರಕ್ಕೆ ಚೈತನ್ಯವನ್ನು ಕೊಟ್ಟಿವೆ ಯೋಗಿಯಾದವನು ಪ್ರಾಣ ವಾಯುವಿನಲ್ಲಿ ಅಪಾನವಾಯುವನ್ನು ಮತ್ತು ಅಪಾನವಾಯುವಿನಲ್ಲಿ ಪ್ರಾಣವಾಯುವನ್ನು ಯೋಜಿಸುತ್ತಾನೆ ಪ್ರಾಣ ಮತ್ತು ಅಪಾನವಾಯುಗಳ ಮಿಲನವೇ ಯೋಗದ ಸಿದ್ಧಿ ಇವೆರಡರಲ್ಲಿ ಒಂದು ಇಲ್ಲದಿದ್ದರೂ, ಶರೀರವು ಚೈತನ್ಯ ರಹಿತವಾಗುತ್ತದೆ ವೈದಿಕ ಶೈಲಿಯಲ್ಲಿ ರೂಪಾತ್ಮಕವಾಗಿ ವರ್ಣಿತವಾಗಿದೆ

**ಕಪಿಂಜಲ** · ಒಂದು ಪಕ್ಷಿ, ಪಪೀಹ, ಕೌರಾ, ಚಾತಕ ಹಾಗೂ ಕೀತರ ಪಕ್ಷಿಗಳಿಗೆ ಈ ಪದವನ್ನು ಪ್ರಯೋಗಿಸುತ್ತಾರೆ

**ಗೃತಸ್ಮದ** ಋಗ್ವೇದದ ೨ನೇ ಮಂಡಲದ ಋಷಿ. ಇವನನ್ನು ಭಾರ್ಗವನೆಂದು ಕರೆದಿದ್ದಾರೆ ಶುನಹೋತ್ರನೆಂದೂ ಹೇಳಿದೆ ಭೃಗುಕುಲದ ಗೋತ್ರಕಾರ, ಪ್ರವರ ಹಾಗೂ ಮಂತ್ರಕಾರನಾಗಿದ್ದಾನೆ ಋಗ್ವೇದದ ಸೂಕ್ತ ದ್ರಷ್ಟಾರನಾಗಿದ್ದಾನೆ ಇವನ ಪೈತೃಕ ನಾಮ ಶೌನಕನೆಂದಿದೆ ಶುನಹೋತ್ರನ ಔರಸ ಹಾಗೂ ಶೌನಕನ ದತ್ತಕ ಪುತ್ರನಾಗಿದ್ದಾನೆ ಪ್ರಾರಂಭದಲ್ಲಿ ಅಂಗಿರಸ ಕುಲದವನಾಗಿದ್ದ ಅನಂತರ ಭೃಗು ಕುಲದವನಾದ

**ಚುಮುರಿ** ಇದು ಅನಾರ್ಯ ಭಾಷೆಯ ಶಬ್ದ. ಇದರ ಪ್ರಯೋಗ ರಾಕ್ಷಸರು ಹಾಗೂ ಮಾನವರಲ್ಲಿದೆ ಎಂದು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ ಆದರೂ ಇದರ ಉಲ್ಲೇಖ ಶಂಬರ, ಉಷ್ಟ್ರ, ಶುಷ್ಣ ರಾಕ್ಷಸರ ಜೊತೆಯಲ್ಲಿದೆ ಇವನು ಅನಾರ್ಯ ರಾಜನೆಂದು ಕಾಣುತ್ತದೆ ಇಂದ್ರನು ಇವನನ್ನು ಸಂಹರಿಸಿ ಇವನ ಕೋಟೆಗಳನ್ನು ನಾಶ ಮಾಡಿದ.

**ದೈತ್ಯ :** ವಾಸ್ತವವಾಗಿ ಸಾನವರೇ. ಕಶ್ಯಪನ ಮೂಲಕ ದಿತಿಯ ಗರ್ಭದಲ್ಲಿ ಹುಟ್ಟಿದ್ದರಿಂದ ದೈತ್ಯರಾದರು. ದೈತ್ಯರ ಪುರೋಹಿತ ಶುಕ್ರಾಚಾರ್ಯ.

**ಧುನಿ :** ಚುಮುರೀ ಮತ್ತು ಧುನಿಯ ಹೆಸರು ಜೊತೆಯಲ್ಲಿ ಬರುತ್ತದೆ.

**ಪುರೋಡಾಶ ·** ಯಜ್ಞದಲ್ಲಿ ಉಪಯೋಗಿಸುವ ಪದಾರ್ಥ.

**ವೃತ್ರ :** ಇಂದ್ರನ ಪ್ರಧಾನ ಶತ್ರು. ಇವನನ್ನು ವಧಿಸಿದ್ದರಿಂದ ವೃತ್ರಹನ್ ಆದ. ಇವನು ಅಂತರಿಕ್ಷದ ದೈತ್ಯ. ಇವನ ತಾಯಿ ದಾನು ಇದರ ಪುಲ್ಲಿಂಗ ರೂಪಾಂತರವೇ ದಾನವ

**ವೈನ್ಯ .** ವೇನನ ವಂಶಜನಾದುದರಿಂದ ಈ ಹೆಸರು ಬಂದಿದೆ. ಭೃಗು ಕುಲದ ಒಬ್ಬ ಮಂತ್ರದ್ರಷ್ಟಾರ

ಶ್ರೀ ಶ್ರೀ ಶ್ರೀ

# ವಾಮದೇವ

ವಾಮದೇವನಿಗೆ ತನ್ನ ತಾಯಿಯ ಗರ್ಭದಲ್ಲಿದ್ದಾಗಲೇ ಆತ್ಮಾನುಭೂತಿ ಯಾಗಿತ್ತು. ಜನ್ಮ ಸಂಬಂಧಿ ಜ್ಞಾನವೂ ಆಗಿತ್ತು. ಸಾಮಾನ್ಯರು ಹುಟ್ಟುವಂತೆ ನಾನೇಕೆ ಹುಟ್ಟಲಿ ? ಎಂಬ ವಿಚಾರ ಹೊಳೆಯಿತು. ಎಲ್ಲಾ ಪ್ರಾಣಿಗಳೂ ಯೋನಿ ಮೂಲಕ ಹುಟ್ಟುತ್ತವೆ ತನ್ನ ಜನ್ಮದ ವಿಚಾರದಲ್ಲಿ ಒಂದು ವಿನೂತನ ವಿಚಾರ ಮಾಡತೊಡಗಿದ. ತಾಯಿಯ ಹೊಟ್ಟೆಯನ್ನು ಸೀಳಿಕೊಂಡು ಹೊರಬರುವ ವಿಚಾರ ಹೊಳೆಯಿತು

ವಾಮದೇವನ ತಾಯಿಗೆ ತನ್ನ ಜೀವ ಕಷ್ಟದಲ್ಲಿರುವುದು ತಿಳಿಯಿತು ಸಂಕಟ ನಿವಾರಣೆಗಾಗಿ ಅದಿತಿಯನ್ನು ಪ್ರಾರ್ಥಿಸಿದಳು. ಇಂದ್ರನೊಡನೆ ಅದಿತಿ ಬಂದಳು ವಾಮದೇವನ ವಿಚಾರ ತಿಳಿಯಿತು

"ವಾಮದೇವ ! ಯೋನಿಜನಾಗುವುದೇ ಸನಾತನ ಧರ್ಮ ಅನಾದಿ ಕಾಲ ದಿಂದಲೂ ಈ ಪದ್ಧತಿ ಜಾರಿಯಲ್ಲಿದೆ ದೇವತೆಗಳೂ ಸಹ ಇಲ್ಲಿಂದಲೇ ಬಂದವರು" ಎಂದು ಗರ್ಭಸ್ಥ ವಾಮದೇವನಿಗೆ ಹೇಳಿದ ಇಂದ್ರ.

"ಇಂದ್ರ ! ತಮ್ಮ ಅಪೇಕ್ಷೆ ಏನು ?" ಎಂದು ಗರ್ಭದಲ್ಲಿದ್ದ ವಾಮದೇವ ಕೇಳಿದ

"ಗೌತಮ ! ಗರ್ಭಕಾಲ ಪೂರ್ಣವಾದ ಮೇಲೆ ಸನಾತನ ಯೋನಿಮಾರ್ಗದಲ್ಲಿ ಜನ್ಮ ತಾಳುವಂತೆ ನೀನು ಹುಟ್ಟು" ಎಂದ ಇಂದ್ರ.

"ಒಂದು ಪಕ್ಷ ಬೇರೆ ಮಾರ್ಗದಲ್ಲಿ ಹುಟ್ಟಿದರೆ ?" ಎಂದು ಪ್ರಶ್ನಿಸಿದ.

"ವಾಮದೇವ! ಸನಾತನ ಮಾರ್ಗವನ್ನು ಬಿಟ್ಟು ಅನ್ಯ ಮಾರ್ಗವನ್ನು ಹಿಡಿದರೆ ನಿನ್ನ ತಾಯಿಗೆ ಅಪಮಾನ ಮಾಡಿದಂತಾಗುತ್ತದೆ ಇದರಿಂದ ಅವಳಿಗೆ ತೊಂದರೆ ಯಾಗುತ್ತದೆ."

"ಇಂದ್ರನೆ ! ಈ ಕಷ್ಟ ಮಾರ್ಗದಲ್ಲಿ ಹುಟ್ಟಲು ಹೇಳಬೇಡ ತಾಯಿಯ ಪಕ್ಕ ದಿಂದ ಮುಗ್ಗುಲಾಗಿ ಬರುವುದೇ ನನಗೆ ಇಷ್ಟ".

"ವಾಮದೇವ ! ನೀನು ಪರಂಪರಾಗತ ಮಾರ್ಗದಿಂದ ಬರಲು ಏಕೆ ಇಚ್ಛಿಸು ವುದಿಲ್ಲ ?"

"ಇಂದ್ರ ! ಬೇರೆಯವರು ಯಾವುದನ್ನು ಮಾಡಿಲ್ಲವೋ ಅದನ್ನು ನಾನು ಮಾಡ ಬೇಕೆಂದಿದ್ದೇನೆ. ಯುದ್ಧದಲ್ಲಿ ಒಬ್ಬ ಶತ್ರುವನ್ನು ಎದುರಿಸುವುದು ಶ್ರೇಯಸ್ಕರ ನನಗೆ ಒಬ್ಬ ವಿರೋಧಿಯೊಡನೆ ವಿವಾದ ಮಾಡುವುದೇ ನನಗೆ ಇಷ್ಟ "

"ವಾಮದೇವ ! ಸನಾತನ ಮಾರ್ಗವನ್ನು ತ್ಯಜಿಸಬೇಡ. ಅದು ಒಳ್ಳೆಯದಾಗುವುದಿಲ್ಲ "

"ಇಂದ್ರ ! ಈ ಗರ್ಭದಲ್ಲಿಯೇ ನನಗೆ ಪೂರ್ವ ಜನ್ಮದ ಸ್ಮರಣೆಯಾಗಿದೆ. ಎಲ್ಲಾ ದೇವತೆಗಳ ಗುಟ್ಟು ತಿಳಿದಿದೆ ನಾನು ಹಿಂದೆ ಮನು ಹಾಗೂ ಸೂರ್ಯನಾಗಿ ಜನಿಸಿದ್ದೆ. ಅದರ ಅರಿವು ಇದೆ "

"ವಾಮದೇವ !"

"ಹೌದು ಇಂದ್ರ ಮೂರು ಜನ್ಮದ ಜ್ಞಾನ ನನಗಿದೆ" ಎಂದ.

"ಮೊದಲ ಜನ್ಮ ಯಾವುದು ವಾಮದೇವ ?"

"ತಂದೆ ಶುಕ್ಲ ತಾಯಿಯ ಶೋಣಿತದಲ್ಲಿ ಸಂಗಮವಾಗುವ ಸಮಯವೇ ಮೊದಲನೇ ಜನ್ಮ "

"ಎರಡನೆಯದು" ? ಎಂದು ಪ್ರಶ್ನಿಸಿದ ಇಂದ್ರ

"ತಾಯಿಯ ಯೋನಿಯಿಂದ ಯಾವಾಗ ಜೀವ ಹುಟ್ಟುತ್ತದೆಯೋ ಅದು ಎರಡನೆಯದು "

"ಮತ್ತೆ ಮೂರನೆಯದು ?"

"ಮೃತ್ಯುವಿನ ಅನಂತರ ಪ್ರಾಣಿ ಪುನಃ ಜನ್ಮ ತಾಳುತ್ತದೆಯೋ ಅದು ಮೂರನೆಯದೆಂದು" ಹೇಳುತ್ತಾರೆ

"ಮತ್ತೆ ?"

"ಇದೇ ಪ್ರಾಣಿಯ ಅಮರತ್ವ" ಎಂದ ವಾಮದೇವ.

ಇಷ್ಟೆಲ್ಲಾ ತಿಳಿದೂ ಸನಾತನ ಮಾರ್ಗದಲ್ಲಿ ಜನಿಸುವುದನ್ನು ತ್ಯಜಿಸಿದ. ವಜ್ರದಂತಿರುವ ತಾಯಿಯ ಗರ್ಭವನ್ನು ತಡೆಯದಾದ. ವಾಮದೇವನು ಯೋಗ ಸಾಮರ್ಥ್ಯದಿಂದ ಗಿಡುಗನಾಗಿ ತಾಯಿಯ ಹೊಟ್ಟೆಯಿಂದ ಹೊರಬಂದ

ವಾಮದೇವನು ಹುಟ್ಟಿದ ಅನಂತರ ಅವನೊಡನೆ ಯುದ್ಧ ಮಾಡಬೇಕೆಂದು ಇಂದ್ರ ಅಪೇಕ್ಷಿಸಿದ ವಾಮದೇವನು ಯುದ್ಧದಿಂದ ವಿಮುಖನಾಗಲಿಲ್ಲ ವಾಮದೇವನ ಎದುರು ಇಂದ್ರ ತನ್ನ ಬಲ ಪ್ರದರ್ಶನ ಮಾಡಿದ ಇದರಿಂದ ವಾಮದೇವನು ವಿಚಲಿತನಾಗಲಿಲ್ಲ ಅವನು ಹತ್ತು ರಾತ್ರಿ ಹತ್ತು ಹಗಲು ಯುದ್ಧ ಮಾಡಿದ ಇಂದ್ರ ವಿಜಯಿಯಾಗಲಿಲ್ಲ ಋಷಿ ವಾಮದೇವನೇ ವಿಜಯಿಯಾದ,

ಋಷಿಗಳ ಸಭೆ ನಡೆದಿತ್ತು ವಾಮದೇವನಿಂದ ಇಂದ್ರ ಸೋತಿದ್ದ. ಆದುದರಿಂದ ವಾಮದೇವ ಋಷಿ ದೇವತೆಗಳನ್ನು ಕುರಿತು ಇಂದ್ರನಿಗೆ ದುಧಾರು ಹಸುಗಳನ್ನು ಕೊಟ್ಟು ಖರೀದಿಸುತ್ತೀರಿ ? ಎಂದ. ಋಷಿಗಳು ಚಕಿತರಾದರು ಪರಸ್ಪರ ಮುಖ ನೋಡಿಕೊಂಡರು.

"ಒಂದು ಷರತ್ತಿನ ಮೇಲೆ ?" ಎಂದ ವಾಮದೇವ, ಉತ್ಸುಕರಾದ ಋಷಿಗಳು ಅವನನ್ನು ನೋಡಿದರು.

"ದೇವಗಣಗಳೆ ಒಂದು ಪಕ್ಷ ಇಂದ್ರನು ನಿಮ್ಮ ಶತ್ರುಗಳನ್ನು ನಾಶ ಮಾಡಿದರೆ ಅವುಗಳನ್ನು ನನಗೆ ಹಿಂತಿರುಗಿಸಿ" ಎಂದ. ವಾಮದೇವನು ಇಂದ್ರನನ್ನು ಸ್ತುತಿಸಿದ.

"ಇಂದ್ರನೆ! ನಿನಗಿಂತ ಶ್ರೇಷ್ಠರು ಯಾರೂ ಇಲ್ಲ ನಿನಗಿಂತ ಪ್ರಸಿದ್ಧನಾದವನು ಮತ್ತೊಬ್ಬನಿಲ್ಲ, ವೃತ್ರಹನ್! ಜಗತ್ತಿನಲ್ಲಿ ನಿನಗೆ ಸರಿ ಸಮಾನನು ಯಾರೂ ಇಲ್ಲ."

ಇಂದ್ರನು ತನ್ನ ಸ್ತುತಿಯನ್ನು ಕೇಳುತ್ತಿದ್ದ ಅವನಿಗೆ ವಾಮದೇವನ ಮೇಲೆ ಕ್ರೋಧವಿತ್ತು ಆದರೆ ಸಭೆಯಲ್ಲಿ ಇಂದ್ರನನ್ನು ಸ್ತುತಿಸುತ್ತಿದ್ದ ಅವನ ಕೋಪ ಶಾಂತವಾಗಿತ್ತು ಪುನಃ ಸ್ತೋತ್ರ ಮಾಡಿದ

"ವೃತ್ರಹನ್! ಶ್ರೀಮಾನ್ ಇಂದ್ರನೆ! ತಾವು ಬಹಳ ಕೋಪಗೊಂಡಿದ್ದೀರಿ ಆದ್ದರಿಂದ ತಾವು ದನುವಿನ ಮಗ ವೃತ್ರನನ್ನು ಅಂತರಿಕ್ಷದಲ್ಲಿ ಕೊಂದಿರಿ." ಇಂದ್ರನ ಕೋಪ ಶಾಂತವಾಯಿತು ವಾಮದೇವನು ಇಂದ್ರನ ಕೋಪ ಶಾಂತವಾದುದನ್ನು ನೋಡಿ ಆತ್ಮಸ್ತುತಿ ವ್ಯಾಜದಿಂದ ಸ್ತುತಿಸಲು ಪ್ರಾರಂಭಿಸಿದ

"ನಾನು ಸೂರ್ಯ, ನಾನು ಮನು, ನಾನೇ ಬುದ್ಧಿವಂತನಾದ ಋಷಿ ಕಕ್ಷೀವತನಾಗಿದ್ದೇನೆ ನಾನು ಅರ್ಜುನಿಯ ಮಗ ಕುತ್ಸನನ್ನು ಹೊಗಳಿದ್ದೇನೆ ನಾನೆ ಕವಿ ಉಶಾನ. ನಾನೇ ಮಾನವರಿಗೆ ಭೂಮಿಯನ್ನು ಕೊಟ್ಟಿದ್ದೇನೆ ಮರ್ತ್ಯರಿಗೆ ಮಳೆ ಸುರಿಸಿದವನು ನಾನೇ ಕಲಕಲ ಶಬ್ದ ಮಾಡುತ್ತಾ ನೀರು ಹರಿಯುವಂತೆ ಮಾಡಿದೆ ದೇವತೆಗಳು ನನ್ನ ಇಚ್ಛೆಯನ್ನು ಪಾಲಿಸುತ್ತಾರೆ ಸೋಮಪಾನ ಮಾಡಿ ಶಂಬರರ ತೊಂಭತ್ತೊಂಬತ್ತು ನಗರಗಳನ್ನು ನಾಶ ಮಾಡಿದೆ ದಿವೋದಾಸನು ಯಜ್ಞದ ರಕ್ಷಣೆ ಮಾಡುತ್ತಿದ್ದಾನೆ ಅವನ ವಾಸಕ್ಕಾಗಿ ಒಂದು ನೂರು ನಗರಗಳನ್ನು ಅವನಿಗೆ ಕೊಟ್ಟೆ" ಎಂದ ಇಂದ್ರನ ಕೋಪ ಶಾಂತವಾಯಿತು

ದರಿದ್ರ ದೇವತೆಯ ಕೃಪೆಗೆ ವಾಮದೇವ ಪಾತ್ರನಾದ ಅವಳ ನೆರಳಿನಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ ಈ ದಾರಿದ್ರ್ಯ ಕಲ್ಪನೆಯೂ ಅವನಿಗೆ ಇರಲಿಲ್ಲ. ಪ್ರಾರ್ಥಿಸುತ್ತಲೇ ಇದ್ದ ದರಿದ್ರ ದೇವತೆಯ ಕೃಪೆ ಇತ್ತು ಆ ದೇವಿಯ ಕೃಪೆಯಿಂದ ಪಾರಾಗಲು ದೂರ ಓಡಿದ ಪಾಪಿಗಳ ಹಿಂದೆ ಪಾಪವು ಓಡುವ ಹಾಗೆ ದರಿದ್ರ ದೇವತೆ ಇವನ ಹಿಂದೆ ಓಡಿದಳು ಆದರೂ ಅವಳು ವಾಮದೇವನನ್ನು ಆಶ್ರಯಿಸೇಬಿಟ್ಟಳು ಅವಳು ತನ್ನ ಸಖಿ ವಿಶಾದಳೊಂದಿಗೆ ಬಂದಿದ್ದಳು ದುಃಖದೊಂದಿಗೆ ಬಂದಿದ್ದಳು ಮಂತ್ರದ್ರಷ್ಟ ವಾಮದೇವನ ತತ್ವಜ್ಞಾನ, ಅವನ ತಪಸ್ಸು ಇವುಗಳು ದರಿದ್ರ ದೇವತೆಯ ಪ್ರಬಲ ಆಕ್ರಮಣದಿಂದ ಇವನನ್ನು ರಕ್ಷಿಸಲಾಗಲಿಲ್ಲ. ಆಶ್ರಮದ ಎಲ್ಲಾ ವಸ್ತುಗಳು ಅಗ್ನಿಗೆ ಆಹುತಿಯಾದವು ಮರಗಳಲ್ಲಿ ಹಣ್ಣುಗಳೂ ಇಲ್ಲದಂತಾದವು.

ವಾಮದೇವನ ಪತ್ನಿ ದುಃಖಿತಳಾದಳು ಹಸುವಿನ ನೋವನ್ನು ಪತಿಯು ಪತ್ನಿಯ ಕಣ್ಣಲ್ಲಿ ನೋಡಿದ. ಆ ನೋವು ಕಣ್ಣಿನಲ್ಲಿಯೇ ನೀರಾಗಿ ಹರಿಯಿತು. ತನ್ನ

ಹೆಂಡತಿಯ ಪುಷ್ಟವಾಗಿದ್ದ ಸ್ತನಗಳು ಒಣಗಿ ವಕ್ಷಸ್ಥಲವನ್ನು ಆಶ್ರಯಿಸಿರುವುದನ್ನು ನೋಡಿದ. ತ್ರಿವಳಿಗಳು ಬೆನ್ನಿಗೆ ಸೇರಿರುವುದನ್ನು ಕಂಡ. ಸೊಂಟ ಬಗ್ಗಿರುವುದನ್ನು ನೋಡಿದ. ಕೇಶಗಳು ಗಂಟಾಗಿರುವುದನ್ನು ಕಂಡ. ಕಾಮಿನಿಯ ಶರೀರದಲ್ಲಿ ದರಿದ್ರ ದೇವತೆಯ ಮಲಿನ ಮಂದಿರವನ್ನು ಕಂಡ

ಋಷಿಗೆ ಬೇಕುಗಳು ಬಹಳ ಇದ್ದವು ಅವುಗಳ ಅಭಾವದಿಂದ ಹಾಗೆಯೇ ಕಣ್ಣುಗಳು ಮುಚ್ಚಿಕೊಂಡವು ಜೊತೆಗಾರರು ಮುಖ ತಿರುಗಿಸಿದರು. ಪಶುಗಳು ಬೇರೆಡೆ ಹೋದವು ಪಕ್ಷಿಗಳು ಮರಗಳ ಆಶ್ರಯವನ್ನು ಬಿಟ್ಟವು ಆದರೆ ಅಗ್ನಿ ಸಾಕ್ಷಿಯಾಗಿ ವಿವಾಹವಾಗಿದ್ದ ಪತ್ನಿ ಇವನ ಜೊತೆಯನ್ನು ಬಿಡಲಿಲ್ಲ. ಅವನ ಪ್ರಿಯ ಪತ್ನಿ, ಪ್ರಿಯ ಭಾರ್ಯೆ, ಅವನ ಜೀವನ ಸಂಗಾತಿ ಸಮಾಜದಲ್ಲಿ ದಾರಿದ್ರ್ಯ ಶಾಪದಿಂದ ಕಣ್ಣು ತೆರೆಯಲು ಸಾಧ್ಯವಾಗಲಿಲ್ಲ. ಗೌರವವೂ ಸಿಗಲಿಲ್ಲ ತನ್ನ ಪತ್ನಿಯ ಬಗೆಗೆ ಜನಗಳಲ್ಲಿ ಅಸಮಾಧಾನವಿರುವುವನ್ನು ಪತಿಯು ನೋಡಿದ. ದರಿದ್ರ ದೇವತೆ ಸನ್ಮಾನವನ್ನು ಜೊತೆಗೆ ತೆಗೆದುಕೊಂಡು ಬಂದಿದ್ದರೆ ಅವಳನ್ನು ಸ್ವಾಗತಿಸುತ್ತಿದ್ದ. ಆದರೆ ಅವಳು ಈ ಜಗತ್ತಿನ ಪೂರ್ಣ ದೋಷಯುಕ್ತಳಾಗಿ ಬಂದಿದ್ದಳು

ದರಿದ್ರ ದೇವತೆ ಬಹಳ ಜಾಗರೂಕಳಾಗಿದ್ದಳು. ಅವಳ ನೆರಳಿನಲ್ಲಿ ಯಾರೂ ಸಮಾಧಾನದ ಉಸಿರು ಬಿಡುವಂತಿರಲಿಲ್ಲ ಮರೆತೂ ಸಹ ಯಾರೂ ಋಷಿ ಪತ್ನಿಯನ್ನು ಗೌರವಿಸಬಾರದು ಸುಖ ಸಂತೋಷಗಳನ್ನು ಮರೆತು ಅವಳನ್ನು ಯಾರೂ ಬಿಟ್ಟು ಬರಬಾರದು ಸಮಾಧಾನದ ಒಂದು ಮಾತೂ ಸಹ ಅವಳ ಸನಿಹ ಸುಳಿಯಬಾರದು ದೇವತೆಗಳಿಗೆ ಒಂದಿನಿತೂ ಕರುಣೆ ಬಾರದಂತೆ ನೋಡಿಕೊಂಡಳು

ಋಷಿಯ ತಪಸ್ಸು ವ್ರತ ಒಂದೂ ಉಪಯೋಗಕ್ಕೆ ಬರಲಿಲ್ಲ. ದರಿದ್ರ ದೇವತೆಯ ಆಶ್ರಯದಲ್ಲಿರುವ ವಾಮದೇವನಿಗೆ ಸಹಾಯ ಮಾಡಲು ಯಾರೂ ಬರಲಿಲ್ಲ. ಅಂದು ದೇವತೆಗಳಿಗೆ ಹವಿಸ್ಸನ್ನು ಕೊಡುತ್ತಿದ್ದ. ಇವನು ಆಹ್ವಾನಿಸುತ್ತಿದ್ದಂತೆ ಬರುತ್ತಿದ್ದರು ಇಂದು ಇವನ ಆಹ್ವಾನ ಸ್ತುತಿಗಳನ್ನು ಕೇಳಿಯೂ ಸಹ ಕಿವುಡರಾಗಿದ್ದರು ಯಾರೂ ಇವನ ಸಹಾಯಕ್ಕೆ ಬರಲಿಲ್ಲ.

ಅವನ ದುಃಖ ಎಲ್ಲೆ ಮೀರಿತ್ತು ದರಿದ್ರ ದೇವತೆ ತನ್ನ ಪ್ರಯೋಗದಲ್ಲಿ ಜಯಶೀಲಳಾಗಿದ್ದಳು ಆದರೂ ಒಂದು ಕ್ಷಣವೂ ವಿಶ್ರಾಂತಿಯನ್ನು ಬಯಸುತ್ತಿರಲಿಲ್ಲ ಹಸುವಿನಿಂದ ಅವನ ಮೂಳೆಗಳು ಮುರಿದಂತೆ ಅನುಭವವಾಗುತ್ತಿತ್ತು. ಋಷಿ ಪತ್ನಿಯು ಹಸಿವು ಬಾಯಾರಿಕೆಗಳಿಂದ ಒಣಗಿದ ಕಣ್ಣುಗಳನ್ನು ಮುಚ್ಚಿಕೊಳ್ಳಲು ಪ್ರಯತ್ನಿಸುತ್ತಿದ್ದಳು. ಈ ಅವಸ್ಥೆಯಲ್ಲಿ ಎಲ್ಲವನ್ನು ತನ್ನ ಪತಿಯಲ್ಲಿ ಹೇಳಿಕೊಳ್ಳಲು ಇಚ್ಛಿಸುತ್ತಿರಲಿಲ್ಲ. ಆದರೂ ದರಿದ್ರ ದೇವತೆಯ ನೆರಳು ಇವರ ಮೇಲೆ ಗಂಭೀರವಾಗಿ ಬೀಳುತ್ತಿತ್ತು

"ಏನಿದು" ಇಂದ್ರ ನೋಡಿದ ವಾಮದೇವ ಋಷಿಯು ನಾಯಿಯ ಮಾಂಸವನ್ನು ಬೇಯಿಸುತ್ತಿದ್ದ. ಋಷಿಯು ಆ ದಟ್ಟ ದರಿದ್ರಾವಸ್ಥೆಯಲ್ಲಿಯೂ ಶಾಂತ

ನಾಗಿದ್ದ. ಅವನಿಗೆ ದಾರಿದ್ರ್ಯವನ್ನು ಅನುಭವಿಸುವುದು ಸಹಜವಾಗಿತ್ತು. ಆಶ್ರಮದ ಒಂದು ಒಣಗಿದ ಕೊಂಬೆಯ ಮೇಲೆ ಒಂದು ಗಿಡುಗ ಕುಳಿತಿತ್ತು. ಅದನ್ನು ಋಷಿ ನೋಡಿದ. ಗಿಡುಗನ ಪ್ರಶ್ನೆಯನ್ನು ಕೇಳಿಸಿಕೊಂಡು ಎಚ್ಚೆತ್ತ.

"ಋಷಿಗಳೆ, ನಾಯಿಯ ಮಾಂಸ ಮತ್ತು ತಾವು .? ತಾವು ದಿವ್ಯವಾದ ಹವ್ಯವಾಹನನಿಗೆ ಹವಿಸ್ಸನ್ನು ಕೊಡುತ್ತಿದ್ದಿರಿ. ಇಂದು ಅದರ ಮೇಲೆ ನಾಯಿಯ ಮಾಂಸವನ್ನು ಬೇಯಿಸುತ್ತಿದ್ದೀರಿ " ಎಂದಿತು ಆ ಗಿಡುಗ.

"ಹೌದು ಬೇಯಿಸುತ್ತಿದ್ದೇನೆ." ಬೇಯುತ್ತಿರುವ ಮಾಂಸವನ್ನು ತಿರುವುತ್ತಾ ಹೇಳಿದ. ಅದರ ದುರ್ಗಂಧದಿಂದ ಆಶ್ರಮದ ವಾತಾವರಣವು ಕೆಟ್ಟಿತ್ತು. ಎಲ್ಲಿ ಸುಗಂಧ ಯಜ್ಞದಿಂದ ಹೊರಡುತ್ತಿತ್ತೋ ಅಲ್ಲಿ ದುರ್ಗಂಧ ಆಕ್ರಮಿಸಿತ್ತು.

"ನಿಮ್ಮ ಕರ್ಮ ಏನಾಯಿತು ಋಷಿಗಳೇ ?" ಎಂದು ಗಿಡುಗ ಪ್ರಶ್ನಿಸಿತು

"ತನ್ನ ಹಸಿವಿಗೆ ಅರ್ಪಿಸಿಬಿಟ್ಟೆ "

"ಇದು ಯಾವ ಧರ್ಮ ?" ಎಂದು ಗಿಡುಗ ಗಂಭೀರವಾಗಿ ಪ್ರಶ್ನಿಸಿತು.

"ಇದು ಆಪದ್ಧರ್ಮ "

ಋಷಿ ಪತ್ನಿಯು ನಿರ್ಗತಿಕವಾಗಿ ಒಣಗಿದ ಶರೀರದೊಡನೆ ಪಕ್ಷಿಯ ಪ್ರಶ್ನೆಯನ್ನು ಕೇಳಿಸಿಕೊಂಡು ಬಂದಳು.

"ಗಿಡುಗ, ಉಳಿದಿರುವ ಈ ಮಾಂಸದಿಂದಲೇ ನಿನ್ನನ್ನು ಸತ್ಕರಿಸಲೆ ?"

ಋಷಿ ಪತ್ನಿಯು ಬೇರೆಡೆಗೆ ಮುಖ ತಿರುಗಿಸಿದಳು. ಋಷಿ ಪತ್ನಿಯನ್ನು ನೋಡಿ ಪಕ್ಷಿಗೆ ಕರುಣೆ ಬಂದಿತು..

"ಪಕ್ಷಿಯೆ ! ಮಾನವರೂ ಸಹ ನನ್ನ ಜೊತೆ ಬಿಟ್ಟರು ದೇವತೆಗಳೂ ನನ್ನನ್ನು ತಿರಸ್ಕರಿಸಿದರು. ಜಗತ್ತೇ ಮರೆತಿರುವ ಮನುಷ್ಯನ ಮೇಲೆ ಕರುಣೆ ತೋರಿಸುತ್ತೀಯೆ. ಇದನ್ನು ನಾನು ಎಂದಿಗೂ ಮರೆಯಲಾರೆ ನೀನು ಪಕ್ಷಿಯ ರೂಪದಲ್ಲಿ ಬಂದಿದ್ದರೂ ಪರವಾಗಿಲ್ಲ."

ಪಕ್ಷಿಯು ಅವರ ಕರುಣಾಪೂರ್ಣ ಸ್ಥಿತಿ ಮತ್ತು ಕಥೆಯನ್ನು ಕೇಳಿ ವಿಚಲಿತವಾಯಿತು. ಪಕ್ಷಿಯು ಇಂದ್ರನಾಗಿ ಕಾಣಿಸಿಕೊಂಡ.

"ತಾವು ಋಷಿದಂಪತಿಗಳು" ಎದ್ದು ನಮಸ್ಕರಿಸಿದರು.

"ಋಷಿಗಳೆ ಇದು ಮಧುರವಾದ ರಸ. ಇದನ್ನು ಸ್ವೀಕರಿಸಿ"

"ದೇವೇಂದ್ರ" ಋಷಿಯ ಕಣ್ಣಲ್ಲಿ ನೀರು ಬಂದಿತು.

"ತಮ್ಮ ಕೃಪೆ. ತಮ್ಮ ದಯೆಯಿಂದ ಎಲ್ಲವನ್ನೂ ಮರೆತೆ ನನ್ನ ನೆನಪು ತಮಗೆ ಬಂದಿತು. ಇನ್ನೂ ಏನು ಹೇಳಲಿ"?

**ಆಧಾರ ಗ್ರಂಥ :**

**ಋಗ್ವೇದ :** ೧-೪-೧೧, ೪-೧೫-೯-೧೦, ೪-೧೬-೧೮, ೪-೧೮, ೪-೨೪,

೪-೨೬-೧೧, , ೪-೨೬, ೧, ೪-೨೭-೧, ೯-೩೮,೧, ೪-೩೨, ೯-೧೨, ೪-೧೨೬
೪-೧೩೧.

ಅಥರ್ವವೇದ : ೧೮-೩-೧೫-೧೬.

ಐತರೇಯ ಅರಣ್ಯ : ೨-೨-೧, ೨-೫-೧, ೪-೧೬-೧೮.

ಐತರೇಯ ಬ್ರಾಹ್ಮಣ . ೪-೩೦-೨, ೬-೧೮-೧-೨,

ಪಂಚವಿಂಶತಿ ಬ್ರಾಹ್ಮಣ : ೧೩-೯-೨೭

ಕಾಠಕ ಸಂಹಿತಾ ೧-೦-೫,

ಮೈತ್ರಾಯಿಣಿ ಸಂಹಿತಾ · ೨-೧-೧೧-೧೩, ೩-೨-೬,

ಐತ್ತರೇಯ ಉಪನಿಷತ್ · ೪-೫

ಬೃಹದಾರಣ್ಯಕೋಪನಿಷತ್ ೧-೪-೧೦-೨೨

ಬೃಹದ್ದೇವತಾ . ೪-೧೩೫

**ಟಿಪ್ಪಣಿ :** ವಾಮದೇವನ ಉಪಾಖ್ಯಾನದಲ್ಲಿ ಪುನರ್ಜನ್ಮದ ಸಿದ್ಧಾಂತ ಪ್ರತಿಪಾದಿತವಾಗಿದೆ ಇದು ಕಾಲಾಂತರದಲ್ಲಿ ಭಗವಂತನ ವಿರಾಟ್ ರೂಪಕ್ಕೆ ಕಾರಣವಾಯಿತು. ಇದರ ಪೂರ್ಣರೂಪದ ವರ್ಣನೆಯನ್ನು ಗೀತೆಯಲ್ಲಿ ನಾವು ಕಾಣಬಹುದು

ಅರ್ಜುನಿ · ಇದು ಒಂದು ನಕ್ಷತ್ರದ ಹೆಸರು ಅಥರ್ವವೇದದಲ್ಲಿ ಇದನ್ನು ಫಲ್ಗುಣೀ ಎಂದು ಕರೆದಿದ್ದಾರೆ

ಕಕ್ಷೀವತ ಇವನು ಒಬ್ಬ ಋಷಿ ಪ್ರಜವಂಶೀಯ ಆದುದರಿಂದ ಇವನನ್ನು ಪ್ರಜಿಪ ಎಂದಿದ್ದಾರೆ ಇವನು ದೇಶೀಯ ರಾಜ ಸ್ವನಯ ಭಾವ್ಯನಿಂದ ದಾನವನ್ನು ಪಡೆದಿದ್ದ. ಇವನನ್ನು ಕಕ್ಷೀವಾನ್ ಔಷಿಜನೆಂದೂ ಸಂಬೋಧಿಸಲಾಗಿದೆ. ಔಷಿಜ ವಂಶೀಯನಾಗಿರಬಹುದು ಉಷಿಜೆ ಎಂಬ ದಾಸಿಯ ಮಗ, ಶತಾಯುಷಿಯಾಗಿದ್ದ ವೃದ್ಧಾಪ್ಯದಲ್ಲಿ ಕುಮಾರಿ ವೃಚಳೊಡನೆ ವಿವಾಹವಾಗಿತ್ತು. ದೀರ್ಘತಮಸನ ಮಗ, ಎಂದು ಕೆಲವರು ಮತ್ತೆ ಕೆಲವರು ಕ್ಷತ್ರಿಯ ಎನ್ನುತ್ತಾರೆ ಆಯವಸು ಹಾಗು ಮಶಶರಿಯ ಮೂವರು ಪುತ್ರರು ಇವನಿಗೆ ತೊಂದರೆ ಮಾಡಿದರು ಎಂದು ಹೇಳುತ್ತಾಳೆ. ಋಗ್ವೇದದ ಕಾಲದಲ್ಲಿ ಇವನು ಒಬ್ಬ ಪ್ರಾಚೀನ ವ್ಯಕ್ತಿ ಎಂದು ತಿಳಿದಿದ್ದರು. ಇವನಿಗೆ ಸೂವತ ದ್ರುಪ್ಪಾ ಎಂಬ ಕನ್ಯೆ ಇದ್ದಳು. ಅಂಗಿರಸ ಕುಲದ ಮಂತ್ರರಲ್ಲಿ ಇವನೂ ಒಬ್ಬ.

**ಕುತ್ಸ :** ಅರ್ಜುನನ ವಂಶಜ. ಕುತ್ಸವಂಶದವರಿಗೆ ಕೌತ್ಸರೆಂದು ಕರೆಯುತ್ತಾರೆ. ಶುಣ್ಣನನ್ನು ಇಂದ್ರನ ಜೊತೆಯಲ್ಲಿ ಸೋಲಿಸಿದ ಇಂದ್ರನಿಂದ ಇವನು ಪರಾಜಿತನಾಗಿದ್ದ ಇವನು ಸ್ಮದಿಯ ಮತ್ತು ವೇತಸುವನ್ನು ಸೋಲಿಸಿದ್ದ. ಗುರು ರಾಜರ್ಷಿಯ ಮಗ. ಇವನನ್ನು ಅರ್ಜುನೇಯನೆಂದು ಹೇಳಿದ್ದಾಳೆ. ಇದರಿಂದ ಇವನ ತಾಯಿಯ ಹೆಸರು ಅರ್ಜುನೀ ಆಗಿರಬೇಕು ಅಂಗಿರಾಕುಲದ ಮಂತ್ರ ದ್ರಷ್ಟಾರ

ಮತ್ತು ಗೋತ್ರ ಪ್ರವರ್ತಕನಾಗಿದ್ದಾನೆ.

**ಧನು :** ಪ್ರಾಚೇತಸ ದಕ್ಷಪ್ರಜಾಪತಿ ಹಾಗೂ ಆಶಿಕ್ನಿನೀ ಮಗಳು. ಕಶ್ಯಪನ ಪತ್ನಿ. ಇವರ ಮಗ ವೃತ್ರ. ದಾನುವಿನ ಮಕ್ಕಳು ದಾನವರಾದರು

**ದಿವೋದಾಸ .** ವೈದಿಕಕಾಲದ ರಾಜರುಗಳಲ್ಲಿ ಪ್ರಮುಖ. ಇವನ ತಂದೆ ಬೃಹದಶ್ವ. ಭರತವಂಶದ ಪ್ರಮುಖ ಕುತ್ಸವಂಶರಾದ ಸುಹಾಸನ ತಂದೆ ಅಥವಾ ತಾತನಿರಬೇಕು ಇವನ ಮಗ ಪಿಜವನ್ ಸುಹಾಸನ ತಂದೆ ಪಿಜವಾನನ್ ತುವಂಶ ಮತ್ತು ಯದುವಂಶದವರಲ್ಲಿ ಇವನಿಗೆ ದೇಶವಿತ್ತು ಇವರಲ್ಲಿ ಶಂಬರದಾಸನು ಇವನ ಪ್ರಬಲ ಶತ್ರು ಅವನು ಪಾರ್ವಾತ್ಯಜಾತಿಯಲ್ಲಿ ಪ್ರಮುಖನಾಗಿದ್ದ ಅಗ್ನಿ ತಲ್ಪದ ಸಮರ್ಥಕನಾಗಿದ್ದ ಪಣಿಯರು, ಪಾರಾವತರು ಹಾಗೂ ವೃಸಯಿಗಳಲ್ಲಿ ಯುದ್ಧ ಮಾಡಿದ ಉಲ್ಲೇಖವಿದೆ ಅತಿಥಿಗಳನ್ನು ಸತ್ಕರಿಸಿದ್ದರಿಂದ ಇವನನ್ನು ಅತಿಥಿಗ್ವಾ ಎಂದು ಕರೆದರು ಭಾರದ್ವಾಜ ಇವರ ಪುರೋಹಿತ.

**ವಾಮದೇವ ·** ಗೌತಮಋಷಿಯ ಮಗನೆಂದು ಹೇಳಿದೆ ಆದ್ದರಿಂದ ಇವನನ್ನು ಗೌತಮನೆನ್ನುತ್ತಾರೆ ಋಗ್ವೇದದ ನಾಲ್ಕನೇ ಮಂಡಲದ ಋಷಿ ಪ್ರಭವಮಂಡಲದ ನಾಲ್ಕನೇ ಸೂಕ್ತ ದ್ರಷ್ಟಾರನಾಗಿದ್ದಾನೆ ಪುನರ್ಜನ್ಮಗಳ ಸಿದ್ಧಾಂತಕ್ಕೆ ಆಚಾರ್ಯ.

**ಶಂಬರ** ದಾಸನಾಗಿದ್ದ. ಕುಲೀನರ ಮಗ ಪರ್ವತದಲ್ಲಿ ವಾಸಮಾಡುವವನು ಇವನಿಗೆ ೯೯ ದುರ್ಗಗಳಿದ್ದವು



# ತ್ರ್ಯರುಣ ವೃಷಜಾನ

"ಪುರೋಹಿತರೆ! " ರಾಜ ತ್ರ್ಯರುಣನು ತನ್ನ ಪುರೋಹಿತ ವೃಷಜಾನನ್ನು ಕರೆದ.

"ಇಕ್ಷ್ವಾಕು" ಪುರೋಹಿತ ತ್ರಿವೃಷ್ಣ ಪುತ್ರ ರಾಜ ತ್ರ್ಯರುಣನ ಹತ್ತಿರ ಬಂದ.

"ಬ್ರಾಹ್ಮಣರೆ! ನನಗೆ ಒಬ್ಬ ಕುಶಲ ಸಾರಥಿ ಬೇಕಾಗಿದೆ" ಎಂದು ಸಾಲಂಕೃತವಾದ ತನ್ನ ರಥವನ್ನು ನೋಡುತ್ತಾ ಹೇಳಿದ

"ರಾಜನ್! ತಾವು ತಪ್ಪು ತಿಳಿಯದಿದ್ದರೆ ನಾನೇ ಸಾರಥಿಯಾಗುತ್ತೇನೆ" ಎಂದು ನಗುತ್ತಾ ವೃಷಜಾನನು ಹೇಳಿದ

"ತಾವು" ಆಶ್ಚರ್ಯಗೊಂಡ ರಾಜ

"ಹೌದು ಇದೊಂದು ಆಟವಾಗುತ್ತದೆ ರಥಕ್ಕೆ ಕಟ್ಟಿದ ಕುದುರೆಗಳನ್ನು

ನೋಡಿ ನಗುತ್ತಾ ಹೇಳಿದ"

"ವಿಚಿತ್ರ ದೃಶ್ಯವಾಗಬಹುದು" ಪುರೋಹಿತನನ್ನು ಲಕ್ಷ್ಯವಿಟ್ಟು ನೋಡಿದ. ಅಲ್ಲಿದ್ದ ಜನ ಸಮೂಹದಲ್ಲಿ ಕೋಲಾಹಲ ಉಂಟಾಯಿತು

"ದಯಮಾಡಿ ರಾಜರೆ' ವಿನಮ್ರವಾಗಿ ನಮಸ್ಕರಿಸುತ್ತಾ ಹೇಳಿದ

"ಶೋಭೆಯುಂಟಾಗಲಾರದು" ಅನುಮಾನದಿಂದ ಹೇಳಿದ ರಾಜ

"ಇಂದು ಇದನ್ನು ನೋಡಿ' ಸರಳವಾಗಿ ಪುರೋಹಿತ ನುಡಿದ ಅಲ್ಲಿದ್ದ ಜನಗಳಿಗೆ ಇದು ಒಂದು ಕುತೂಹಲ ಕೆರಳಿಸುವ ವಸ್ತುವಾಯಿತು ಪುರೋಹಿತನು ರಥದ ಕಡೆ ಮುನ್ನಡೆದು ಸಾರಥಿಯ ಜಾಗದಲ್ಲಿ ಕುಳಿತ ಕುದುರೆಗಳ ಲಗಾಮನ್ನು ಕೈಯಲ್ಲಿ ಹಿಡಿದ ಒಂದು ಸಾರಿಜಗ್ಗಿದ ಇವನು ಸರಿಯಾದ ಸಾರಥಿ ಎಂದು ಕುದುರೆಗಳಿಗೆ ತಿಳಿಯಿತು. ಓಡಲು ಸಿದ್ಧವಾದವು ಪುರೋಹಿತ ಸಾರಥಿಯರೂಪು ನೋಡಿ ರಾಜ ಗಂಭೀರನಾದ ಈ ಅಪೂರ್ವ ನೋಟ ಜನಗಳ ಕುತೂಹಲಕ್ಕೆ ಕಾರಣವಾಯಿತು ರಾಜನು ರಥದ ಸಮೀಪ ಬಂದ. ಪುರೋಹಿತನಿಗೆ ನಮಸ್ಕರಿಸಿದ ಕುದುರೆಗಳನ್ನು ತಟ್ಟಿದ. ಕುದುರೆಗಳು ಯಜಮಾನ ಬಂದನೆಂದು ಅರಿತವು ಅವುಗಳ ನಾಲ್ಕೂ ಕಾಲುಗಳು ಕುಣಿಯುತೊಡಗಿದವು.

ರಾಜನು ರಥವನ್ನು ಪ್ರದಕ್ಷಿಣೆ [illegible] ಎಲ್ಲವೂ ಸರಿಯಾಗಿತ್ತು ಎಲ್ಲರಿಗೂ ವಂದಿಸಿ ರಥದಲ್ಲಿ ಕುಳಿತ ಜನಗಳು ಸಂತಸಗೊಂಡರು ಪುರೋಹಿತನು ಲಗಾಮನ್ನು ಹಿಡಿದು ಮೆಲ್ಲಗೆ ಎಳೆದ ಕುದುರೆಗಳು ಸಂಕೇತವನ್ನು ತಿಳಿದವು ರಥವು ವಾಯುವೇಗದಲ್ಲಿ ಜನಗಳಿಗೆ ಧೂಳನ್ನು ಬಿಟ್ಟು ಮುಂದೆ ಹೊರಟಿತು

"ಮಗು, ಮಗು, ಮಗು" ಎಂದು ರಾಜನು ರಥದಿಂದ ಮೇಲೇಳುತ್ತಾ ಕೂಗಿದ. ವೇಗವಾಗಿ ಹೋಗುತ್ತಿದ್ದ ರಥವನ್ನು ಸಾರಥಿಯು ಎಷ್ಟು ಪ್ರಯತ್ನಿಸಿದರೂ ನಿಲ್ಲಿಸಲಾಗಲಿಲ್ಲ. ಬ್ರಾಹ್ಮಣನ ಮಗುವಿನ ತಲೆ ರಥದ ಚಕ್ರದಿಂದ ಕತ್ತರಿಸಲ್ಪಟ್ಟಿತ್ತು ಭೂಮಿ ರಕ್ತರಂಜಿತವಾಯಿತು.

ಪುರೋಹಿತನು ಶಕ್ತಿಮೀರಿ ಲಗಾಮನ್ನು ಜಗ್ಗಿದ ರಥ ನಿಂತಿತು. ಅಷ್ಟರಲ್ಲಿಯೇ ರಥದ ಚಕ್ರರಕ್ತದಿಂದ ಕೆಂಪಾಗಿತ್ತು ಕುಮಾರನ ಜೀವ ಹೋಗಿತ್ತು. ರಾಜನು ರಥದಿಂದ ಧುಮುಕಿದ. ರಥ ಮುಂದೆ ಸರಿಯಿತು ರಾಜನು ಬಾಲಕನ ಹತ್ತಿರ ಹಿಂದಕ್ಕೆ ಬಂದ. ಬಾಲಕನ ತಲೆ ಶರೀರದಿಂದ ಬೇರೆಯಾಗಿತ್ತು ಕ್ರೂರವಾದ ರಥದ ಚಕ್ರ ಕುತ್ತಿಗೆಯ ಮೇಲೆ ಹರಿದಿತ್ತು ಪುರೋಹಿತನು ಲಗಾಮನ್ನು ರಥದ ಕಂಬಕ್ಕೆ ಕಟ್ಟಿದ ರಥದಿಂದ ಇಳಿದು ಬಾಲಕನ ಹತ್ತಿರ ಹೋದ ಅವನ ಸ್ಥಿತಿ ವಿಶಾದ ಪೂರ್ಣವಾಯಿತು. ರಾಜ ಮತ್ತು ಪುರೋಹಿತರು ಒಬ್ಬರನೊಬ್ಬರು ನೋಡಿದರು ರಾಜನ ದೃಷ್ಟಿಯಲ್ಲಿ ಕ್ರೋಧವಿತ್ತು. ಪುರೋಹಿತನ ದೃಷ್ಟಿಯಲ್ಲಿ ದುಃಖವಿತ್ತು

ಜನಗಳು ಸೇರಿದರು. ಇಬ್ಬರೂ ಕೊಲೆಗೆ ಕಾರಣರಾಗಿದ್ದರು. ಜನರಸಿಟ್ಟು

ರಥಿಕ ಹಾಗೂ ಸಾರಥಿಯ ಮೇಲೆ ಅಧಿಕವಾಯಿತು. ಈಗ ಬಾಲಕನನ್ನು ಉಳಿಸಲು ಸಾಧ್ಯವಿರಲಿಲ್ಲ. ಅವನು ಸತ್ತಿದ್ದ. ಅವನ ರಕ್ತಧೂಳಿನಿಂದ ಕೂಡಿದ ಶರೀರವನ್ನು ಕರುಣೆಯಿಂದ ಅಳಿಸುತ್ತಿತ್ತು. ಜನಗಳ ಬೆದರಿಕೆಯಿಂದ ರಾಜ ವಿಚಲಿತನಾದ

"ಸಾರಥಿ! ಈ ಕೊಲೆಗೆ ನೀನೇ ಕಾರಣ ಎಂದು ಸಿಟ್ಟಿನಿಂದ ಹೇಳಿದ

"ಇಲ್ಲ" ಎಂದು ಪಶ್ಚಾತ್ತಾಪದಿಂದ ಉತ್ತರಿಸಿದ

"ಈ ಕೊಲೆಗೆ ನೀನೇ ಹೊಣೆಗಾರ" ರಾಜನು ಪುರೋಹಿತನನ್ನು ಅಪರಾಧಿಯನ್ನಾಗಿ ಮಾಡಿದ.

"ಇಲ್ಲ" ಎಂದು ದೃಢವಾಗಿ ಹೇಳಿದ

"ನೀನು ಕೊಲೆಗಾರ" ಕ್ರೂರ ದೃಷ್ಟಿಯಿಂದ ರಾಜ ನೋಡಿದ.

"ಇಲ್ಲ" ಪುರೋಹಿತನು ಗಂಭೀರವಾಗಿ ಹೇಳಿದ

"ರಥವನ್ನು ನೀನು ನಡೆಸುತ್ತಿದ್ದೆ

"ಆದರೆ ರಥದ ಒಡೆಯ ತಾವು. ಇದರ ಹೊಣೆ ತಮ್ಮದಾಗಿದೆ"

"ನನ್ನ ಕೈಯಲ್ಲಿ ಲಗಾಮು ಇರಲಿಲ್ಲ ಕುದುರೆಗಳನ್ನು ನಾನು ನಿಯಂತ್ರಿಸುತ್ತಿರಲಿಲ್ಲ ರಥವನ್ನು ಓಡಿಸುತ್ತಿರಲಿಲ್ಲ" ಎಂದು ತಪ್ಪಿಸಿಕೊಳ್ಳಲು ಪ್ರಯತ್ನಿಸಿದ

"ಹೊಣೆಗಾರಿಕೆಯಿಂದ ನೀವು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ರಾಜನು ತನ್ನ ಪ್ರಜೆಗಳ ತನ್ನ ಕೆಲಸಗಾರರ ಕರ್ಮಗಳಿಗೆ ಹೊಣೆಗಾರನಾಗುತ್ತಾನೆ"

ಇದರಲ್ಲಿ ನನ್ನದೇನು ಅಪರಾಧ"

"ನೀನು ರಥವನ್ನು ನಿಲ್ಲಿಸಲಿಲ್ಲ "

"ನಾನು ನಿಲ್ಲಿಸಲು ಬಹಳ ಪ್ರಯತ್ನಪಟ್ಟೆ "

"ಆದರೂ ಕುಮಾರನ ಕೊಲೆಯಾಯಿತು "

"ನಾನು ಪ್ರಯತ್ನಿಸಿದೆ ಕುದುರೆಗಳನ್ನು ತಡೆದೆ ಅವು ವೇಗವಾಗಿ ಹೋಗುತ್ತಿದ್ದವು ನಿಲ್ಲಲಿಲ್ಲ ನಾನು ಹುಡುಗನನ್ನು ಚಕ್ರದ ಕೆಳಗೆ ಬಾ ಎಂದು ಹೇಳಲಿಲ್ಲ."

"ಇಲ್ಲ ಪುರೋಹಿತರೆ! ನೀವೇ ಅಪರಾಧಿಗಳು "

"ರಾಜರೆ! ಈ ಹತ್ಯೆಯ ಅಪರಾಧ ತಮ್ಮ ಮೇಲೆ ಇದೆ "

"ಹುಡುಗ ಸತ್ತಿದ್ದಾನೆ ಈ ವಿವಾದದಿಂದ ಪ್ರಯೋಜನವೇನು ? ಎಂದು ಕೋಪದಿಂದ ಜನರು ಕೇಳಿದರು

"ಇಬ್ಬರೂ ಕೊಲೆಗಡುಕರೆ" ಒಬ್ಬ ಕೂಗಿದ

"ಇಲ್ಲ ರಾಜನೇ ಕೊಲೆಗಾರ" ಇನ್ನೊಬ್ಬ ಹೇಳಿದ

"ಇಲ್ಲ ಪುರೋಹಿತನೇ ಕೊಲೆಗಾರ" ಮೂರನೆಯವನು ಹೇಳಿದ,

"ಅಪರಾಧಿಗೆ ಶಿಕ್ಷೆಯಾಗಲೇಬೇಕು " ಜನತೆಯ ಕ್ರೋಧ ಹೆಚ್ಚಾಯಿತು.

"ನಿಶ್ಚಯವಾಗಿ" ರಾಜನು ಜನತೆಯ ಅಭಿಪ್ರಾಯಕ್ಕೆ ಒತ್ತು ಕೊಟ್ಟ

"ಯಾರು ನಿರ್ಧರಿಸುವವರು ? "ಜನತೆ ಪ್ರಶ್ನಿಸಿತು.

"ನಿರ್ಣಯವನ್ನು ಇಕ್ಷ್ವಾಕು ಮಾಡುವರು" ರಾಜನು ಉತ್ತರಿಸಿದ.

"ಹೌದು ಇದೇ ಸರಿ. ಅಪರಾಧದ ನಿರ್ಣಯವನ್ನು ಇಕ್ಷ್ವಾಕು ಮಾಡುತ್ತಾರೆ." ಎಂದು ಜನತೆ ಕೂಗಿತು.

"ಆದರೆ. ಪುರೋಹಿತನು ಏನೋ ಹೇಳಲು ಹೊರಟ. ಜನಗಳ ಗದ್ದಲದಲ್ಲಿ ಅವನ ಧ್ವನಿ ಯಾರಿಗೂ ಕೇಳಿಸಲಿಲ್ಲ

ಮಗುವಿನ ತಂದೆ ತಾಯಿ ಬಂದರು. ಸತ್ತಿರುವ ತಮ್ಮ ಮಗನನ್ನು ನೋಡಿದರು. ಬಹಳ ದುಃಖಿಸಿದರು ರಾಜನಿಗೆ ಅವರ ಸ್ಥಿತಿಯನ್ನು ನೋಡಿ ಅಳು ಬಂದಿತು. ಪುರೋಹಿತನು ಆಲೋಚಿಸುತ್ತಾ ಮೃತ ಶರೀರವನ್ನು ನೋಡುತ್ತಿದ್ದ ಅವನ ಹೃದಯ ವಿಚಲಿತವಾಗಿತ್ತು. ಹುಡುಗ ಸತ್ತಿದ್ದ ತಂದೆ ತಾಯಿಗಳು ತಮ್ಮ ಮಗನನ್ನು ಕಳೆದುಕೊಂಡಿದ್ದರು. ತಂದೆ ತಾಯಿಗಳು ಯಾವ ತಪ್ಪಿಗಾಗಿ ತಮ್ಮ ಮಗನನ್ನು ಕಳೆದುಕೊಂಡಿದ್ದರು ? ಈ ಪ್ರಶ್ನೆ ರಾಜ ಮತ್ತು ಪುರೋಹಿತನ ಎದುರಿಗೆ ಮೂರ್ತಿವುತ್ತಾಗಿ ನಿಂತಿತು

ಪುರೋಹಿತ ಶಾಂತನಾಗಿದ್ದ ಮುಂದೆ ಹೋದ ಹುಡುಗನ ಹತ್ತಿರ ಬಂದ ಅವನು ಅಥರ್ವಮಂತ್ರಗಳನ್ನು ಪಠಿಸಿದ ವಾರ್ಷಸಾಮ ಸ್ತೋತ್ರಗಳನ್ನು ಪ್ರಾರ್ಥಿಸಿದ ಮಂತ್ರಶಕ್ತಿಯು ತನ್ನ ಅದ್ಭುತ ಶಕ್ತಿಯನ್ನು ಪ್ರದರ್ಶಿಸಿತು ಬಾಲಕ ಜೀವಂತನಾದ ಜನತ ಪ್ರಸನ್ನವಾಯಿತು ರಾಜನೂ ಪ್ರಸನ್ನನಾದ ಕುಮಾರನು ತನ್ನ ತಂದೆ ತಾಯಿಯೊಡನೆ ಆಟವಾಡುತ್ತಿದ್ದ ಶೋಕವು ಹರ್ಷರೂಪ ತಾಳಿತು ಪುರೋಹಿತನು ಲಗಾಮನ್ನು ಹಿಡಿದ. ರಾಜನು ರಥ ಹತ್ತಿ ಕುಳಿತ.

"ಯಾವ ಕಡೆ ಹೋಗಲಿ ?"

"ಇಕ್ಷ್ವಾಕು ನಮ್ಮ ನಿರ್ಣಯವನ್ನು ಮಾಡುವರು ರಾಜನು ಆಜ್ಞಾರೂಪದಲ್ಲಿ ಹೇಳಿದ.

ಪುರೋಹಿತನು ವಿಚಲಿತನಾಗಲಿಲ್ಲ ಅವನು ಸ್ಪಷ್ಟ ಸ್ವರದಲ್ಲಿ 'ಸರಿಯಾಗಿದೆ' ಎಂದು ಹೇಳಿದ

ರಥವು ಅಪರಾಧ ನಿರ್ಣಯ ನಿಮಿತ್ತವಾಗಿ ಇಕ್ಷ್ವಾಕುವಿನ ನಿವಾಸಕ್ಕೆ ಹೊರಟಿತು.

"ರಾಜನೇ ಬೆಂಕಿಯಲ್ಲಿ ಬಿಸಿ ಇಲ್ಲ." ಸೇವಕ ಕೈಮುಗಿಯುತ್ತಾ ಹೇಳಿದ.

"ಇದು ಹೇಗೆ ಸಾಧ್ಯ" ರಾಜನು ಆಶ್ಚರ್ಯದಿಂದ ಕೇಳಿದ.

"ಪೃಥ್ವೀ ಪತಿಯೆ ! ಅಗ್ನಿ ಉರಿಯುತ್ತಿದೆ ಜ್ವಾಲೆಗಳು ಮೇಲೇಳುತ್ತಿವೆ. ಆದರೆ ಅದರಲ್ಲಿ ಬಿಸಿ ಇಲ್ಲ." ಭಯದಿಂದ ಪರಿಚಾರಕ ಹೇಳಿದ

ರಾಜ ಚಿಂತಿತನಾದ. ಸೇವಕ ಬಂದು ವಿನಯದಿಂದ,

"ಧರ್ಮರಾಜರೆ ಅಡಿಗೆ ಮನೆಯಲ್ಲಿ ಭೋಜನಾದಿಗಳ ತಯಾರಿಕೆ ನಿಂತು ಹೋಗಿದೆ." ಎಂದು ಹೇಳಿದ.

"ಏಕೆ ?"

"ಬೆಂಕಿಯಿಂದ ಬೇಯುತ್ತಿಲ್ಲ."

"ನನಗೆ ಏನೂ ಹೊಳೆಯುತ್ತಿಲ್ಲ. ಇದೆಲ್ಲಾ ಹೇಗೆ ಸಾಧ್ಯ ?"

"ಇದೇ ಆಗುತ್ತಿದೆ."

"ನಡೆ ಹೋಗೋಣ." ಎಂದು ಸೇವಕಿಯರೊಡನೆ ಅಂತಃಪುರವನ್ನು ಹೊಕ್ಕ.

"ಮಹಾರಾಜರೆ! ಮಹಾರಾಜರೆ! ಮಹಾರಾಜರೆ!" ಎಂದು ಕೂಗುತ್ತಾ ಜನತೆ ರಾಜಸಭೆಗೆ ಬಂದು ಸೇರಿದರು. ರಾಜನು ಉದಾಸೀನನಾಗಿ ಸಿಂಹಾಸನದಲ್ಲಿ ಕುಳಿತಿದ್ದ. ಜನತೆಯ ಕೂಗು ಕೇಳಿಸಿತು. ಎದ್ದು ನಿಂತ.

"ಮನೆಯಲ್ಲಿ ಒಲೆಗಳು ಉರಿಯುತ್ತಿಲ್ಲ ನೀರೂ, ಹಾಲೂ ಯಾವುದೂ ಬಿಸಿಯಾಗುತ್ತಿಲ್ಲ ಈ ವಿಪತ್ತು ಹೇಗೆ ಬಂತು ರಾಜರೆ ?" ಎಂದು ಕೇಳಿದರು.

"ಇದೇ ನನ್ನ ಚಿಂತೆಗೆ ಕಾರಣವಾಗಿದೆ." ಎಂದು ಉತ್ತರಿಸಿದ.

"ಇದಕ್ಕೆ ಕಾರಣರು ನೀವೆ ?"

"ನಾನೇನು ಅಪರಾಧ ಮಾಡಿದೆ ?" ಎಂದು ತಲೆ ತಗ್ಗಿಸಿದ.

"ಪುರೋಹಿತರೆಲ್ಲಿ ?" ಎಂದು ಗುಂಪು ಕೇಳಿತು

ರಾಜನು ಬಗ್ಗಿದ್ದ ತಲೆ ಎತ್ತಿದ.

"ಪುರೋಹಿತರೆ,! ಪುರೋಹಿತರೆ! ದೇವರು ಸಿಟ್ಟಾಗಿದ್ದಾನೆಯೇ" ಎಂದು ಕೇಳಬೇಕೆಂದರು

"ಅವರು ವಿದೇಶಕ್ಕೆ ಹೋದರು" ಎಂದು ನಿಧಾನವಾಗಿ ಹೇಳಿದ ರಾಜ

"ಏಕೆ" ಧ್ವನಿಯಲ್ಲಿ ಕೋಪವಿತ್ತು

"ಇಕ್ಷ್ವಾಕುಗಳು ನಿರ್ಣಯವನ್ನು ಹೇಳಿದ್ದರು"

ಜನತೆ ಶಾಂತವಾಯಿತು. ಮುಂದೆ ಹೇಳುವುದನ್ನು ಕೇಳಲು ಜನತೆ ಕಾತುರರಾಗಿದ್ದರು.

"ಕುಮಾರನ ಸಾವಿಗೆ ಪುರೋಹಿತರೇ ಕಾರಣ" ಎಂದು ಇಕ್ಷ್ವಾಕುಗಳು ಹೇಳಿದರು.

"ಓ ಈ ಸಮಾಚಾರವೋ!" ಅವರಲ್ಲಿ ಒಬ್ಬ ಹೇಳಿದ.

"ಹೌದು, ಸರಿ ಇಕ್ಷ್ವಾಕವು ರಾಜನ ಪರವಾಗಿ ಹೇಳಿರಬಹುದು." ಎಂದು ಯಾರೋ ವ್ಯಂಗ್ಯ ಮಾಡಿದರು.

"ಈ ಅಧರ್ಮವನ್ನು ನೋಡಿ ಪುರೋಹಿತರು ಸಿಟ್ಟಿನಿಂದ ರಾಜ್ಯ ಬಿಟ್ಟು ಹೋಗಿದ್ದಾರೆ. ಜನತೆ ಒಕ್ಕೊರಲಿನಿಂದ ಕೂಗಿತು.

ಅವರ ಕ್ರೋಧಾಗ್ನಿಯು ಜೊತೆಯಲ್ಲಿ ಇಲ್ಲಿಯೂ ಸಹ ಹೋಗಿರಬಹುದು ? ಎಂದು ರಾಜ ಹೇಳಿದ.

"ಅವರು ದೋಷಿಗಳಲ್ಲ." ಕೆಲವರು ಹೇಳಿದರು.

"ತಮ್ಮ ಜೊತೆಯಲ್ಲಿ ಅಗ್ನಿಯ ದಹನ ಕ್ರಿಯೆಯನ್ನು ತೆಗೆದುಕೊಂಡು ಹೋಗಿದ್ದಾರೆ. ಅನ್ಯಾಯದ ರಾಜ್ಯದಲ್ಲಿ. ತೇಜಸ್ಸು ಹೇಗಿರುತ್ತದೆ ?"

ಜನತೆಯ ರೋಷವನ್ನು ರಾಜನು ನೋಡಿದ.

"ನಿಲ್ಲಿ ಇದು ಅನ್ಯಾಯವಲ್ಲ" ಎಂದು ಗಂಭೀರವಾಗಿ ಹೇಳಿದ.

"ಇದು ನ್ಯಾಯವಲ್ಲದಿದ್ದರೆ ನಮಗೆ ಈ ಕಷ್ಟ ಏಕೆ ಬರುತ್ತಿತ್ತು ?" ಒಬ್ಬ ಮುಂದೆ ಬಂದು ಪ್ರಶ್ನಿಸಿದ.

"ಯಜ್ಞದ ಅಗ್ನಿಯು ಶಾಂತವಾಗಿದೆ." ಎಂದು ಋಷಿಗಳು ಹೇಳಿದರು. ಜನತೆ ಋಷಿಗಳನ್ನು ನೋಡಿದರು

"ಬರಗಾಲ ಬರುತ್ತದೆ " ಎಂದಿತು ಜನತೆ

"ಇದಕ್ಕೆ ಉಪಾಯವೇನು ?" ರಾಜನು ಪ್ರಶ್ನಿಸಿದ

"ಪುರೋಹಿತ ವೃಷಜಾನನನ್ನು ಹಿಂದಕ್ಕೆ ಕರೆಸಿರಿ" ಜನತೆ ಕೂಗಿತು.

"ಮಹಾತ್ಮರೆ!" ವೃಷಜಾನನ ಮುಂದೆ ಕೈಮುಗಿದು "ರಾಜ ಬೇಡುತ್ತಿದ್ದ."

"ರಾಜರೇ ಬಹಳ ಕಾಲ ಬಾಳಿ" ಪುರೋಹಿತನನ್ನು ಆಶೀರ್ವದಿಸಿದ.

"ರಾಜ್ಯದಲ್ಲಿ ಭಯಂಕರ ಸ್ಥಿತಿ ಉಂಟಾಗಿದೆ "

"ಗೊತ್ತು"

"ಅನ್ಯಾಯಕ್ಕೆ ಪ್ರತೀಕಾರವೇ ?"

"ರಾಜರೆ! ನ್ಯಾಯವಿಲ್ಲದ ರಾಜ್ಯ ಆತ್ಮವಿಲ್ಲದ ಶರೀರದಂತೆ"

"ಮಹಾತ್ಮರೆ ಕ್ಷಮಿಸಿ"

"ಪೃಥ್ವೀಪತಿ! ಕ್ಷಮೆಯೇ ಧರ್ಮ " ಪುರೋಹಿತನು ಪ್ರಸನ್ನನಾದ.

"ಮಾನವರಿಂದ ಅಪರಾಧಗಳಾಗುತ್ತವೆ !" ಕೈಮುಗಿದು ನಾಚಿ ಹೇಳಿದ.

"ಏನಾಗಬೇಕು ತಿಳಿಸಿ" ಎಂದು ನಗುತ್ತಾ ಪುರೋಹಿತರು ಕೇಳಿದರು.

"ತಾವು ಪುರೋಹಿತರಾಗಿ ಮತ್ತೊಮ್ಮೆ ಆ ಸ್ಥಳವನ್ನು ಅಲಂಕರಿಸಿ." ಎಂದು ನಮಸ್ಕರಿಸುತ್ತಾ ಹೇಳಿದ ಪುರೋಹಿತರು ಉತ್ತರಿಸಲಿಲ್ಲ.

"ಮಹಾತ್ಮರೆ ! ಈ ಜನತೆಯ ಸೇವೆಯನ್ನು ಮಾಡಿದ್ದೀರಿ. ಅದಕ್ಕೆ ನಾನು ಸೇವಕ. ಅವರ ಅಪರಾಧಗಳೇನು ? ಅವರ ಅಪರಾಧಕ್ಕೆ ಈ ಕಷ್ಟಗಳನ್ನು ಹೊರುತ್ತಿದ್ದೇನೆ.

"ರಾಜನೆ"

"ಕೇಳಿ ನಿಮ್ಮ ಪೌರೋಹಿತ್ಯವು ನನ್ನ ರಾಜ್ಯದ ಅಸ್ತಿತ್ವವು ಜನತೆಯ ಅಸ್ತಿತ್ವದ ಮೇಲೆ ನಿಂತಿದೆ. ನಾವಿದ್ದೇವೆ. ಅವರೇ ಇಲ್ಲದಿದ್ದರೆ ನಮ್ಮ ಇರುವಿಕೆಗೆ ಬೆಲೆ ಇಲ್ಲದಂತಾಗುತ್ತದೆ."

ವೃಷಜಾನನು ಗಂಭೀರನಾದ.

"ಇಂಥಹ ಸಮಯದಲ್ಲಿ ಹಠ ಸರಿಯಲ್ಲ ಅದು ಗೌರವವೂ ಅಲ್ಲ, ಮಾನವನ

ಕರ್ತವ್ಯದ ಕೋಮಲ ಸೂತ್ರದಲ್ಲಿ ನಾವುಗಳು ಬಂಧಿತರಾಗಿದ್ದೇವೆ. ಸೂತ್ರ ಕಡಿದರೆ ಇನ್ನೂ ಉಳಿಯುವುದಾದರೂ ಏನು ?"

ವೃಷಜಾನನಿಗೆ ವಿವೇಕೋದಯವಾಯಿತು. ರಾಜನು ಕೈಮುಗಿದು ಪ್ರಾರ್ಥಿಸಿದ.

"ನೂರಾರು ಮುಗ್ಧ ಮಕ್ಕಳು, ಬಾಲಕರು, ನರ ನಾರಿಯರು ಎಲ್ಲಾ ಕಷ್ಟದಲ್ಲಿದ್ದಾರೆ. ಇದು ಎಲ್ಲೆಡೆ ಹರಡಿದೆ. ನನಗೆ ಅಥವಾ ರಾಜಪರಿವಾರಕ್ಕೆ ಕಷ್ಟವಲ್ಲ. ಇದು ಕೇವಲ ರಾಜ ವಂಶಕ್ಕೆ ಮಾತ್ರ ಸೀಮಿತವಾಗಿದ್ದರೆ ಚಿಂತೆ ಇರಲಿಲ್ಲ. ಬಂದಿದ್ದರೆ ಅನುಭವಿಸುತ್ತಿದ್ದೆವು ಆದರೆ ನಿರಪರಾಧಿ ಜನತೆ ಕಷ್ಟದಲ್ಲಿ ತೊಳಲಾಡುತ್ತಿದೆ" ಎಂದ.

ವೃಷಜಾನನು ರಾಜನನ್ನು ಸಮೀಪಿಸಿದ. ರಾಜನು ಪ್ರೇಮದಿಂದ "ತಮ್ಮ ಧರ್ಮ ಕ್ಷಮಿಸತಕ್ಕದು ನನ್ನ ಧರ್ಮ ದಂಡನೀಯವಾದುದು. ನೀವೇನಾದರೂ ದಂಡವನ್ನು ಅಪೇಕ್ಷಿಸಿದರೆ ತಾವು ತಮ್ಮ ಧರ್ಮದಿಂದ ವಿರಕ್ತರಾಗಿದ್ದೀರಿ. ತಾವು ತಮ್ಮ ಧರ್ಮವನ್ನು ಆಶ್ರಯಿಸಿರಿ ಜನತೆಯ ಕಷ್ಟವನ್ನು ನಿವಾರಿಸಬೇಕಾಗಿದೆ. ನನ್ನ ದೋಷಕ್ಕೆ ದಂಡವನ್ನು ಜನತೆಗೆ ಕೊಡುವುದಾದರೆ ಅದು ಅಪರಾಧವಾಗುತ್ತದೆ. ನನಗೆ ದಂಡ ವಿಧಿಸಿರಿ ನಾನು ಕ್ಷಮೆಯನ್ನು ಕೇಳುತ್ತಿದ್ದೇನೆ ತಾವು ಕ್ಷಮಾಧರ್ಮವನ್ನು ಮರೆತಿಲ್ಲ ತಾನೆ ?"

"ರಾಜನೆ! ನಾನು ತಮ್ಮ ಪುರೋಹಿತನಾಗಲು ಒಪ್ಪಿದ್ದೇನೆ" ಎಂದು ಸಂತೋಷದಿಂದ ಹೇಳಿದ ರಾಜನು ಶ್ರದ್ಧಾಪೂರ್ವಕವಾಗಿ ವೃಷಜಾನನಿಗೆ ವಂದಿಸಿದ. ಜನಗಳಲ್ಲಿ ವಿಶ್ವಾಸ ಮೂಡಿತು ರಾಜನು ತನ್ನ ಪುರೋಹಿತ ವೃಷಜಾನನೊಡನೆ ಅರಮನೆಗೆ ಬಂದ ಅರಮನೆಯ ಹೊರಗೆ ಜನತೆ ಅಧಿಕವಾಗಿ ಸೇರಿದ್ದಿತು ಜಾಗ್ರತೆ ಮಳೆ ಬರುವುದೆ ? ಎಂಬುದನ್ನು ತಿಳಿಯಲು ಉತ್ಸುಕರಾಗಿದ್ದರು

ರಾಜನು ವಿಧಿವತ್ತಾಗಿ ಪುರೋಹಿತನನ್ನು ಸನ್ಮಾನಿಸಿದ. ಪುರೋಹಿತನು ಅರಮನೆಯಲ್ಲಿ ಕಳೆದು ಹೋಗಿರುವ ಅಗ್ನಿತಾಪವನ್ನು ಹುಡುಕುತ್ತಿದ್ದನು. ಪುರೋಹಿತನಿಗೆ ಆಶ್ಚರ್ಯವಾಯಿತು ಅವನು ರಾಜನನ್ನು ಕುರಿತು

"ರಾಜನೆ! ಇದಕ್ಕೆ ಕಾರಣವನ್ನು ಹುಡುಕಿದೆ."

ರಾಜನಿಗೆ ಸಂತೋಷವಾಯಿತು. ಜನತೆಯೂ ಸಂತೋಷಪಟ್ಟಿತು.

"ನಡೆಯಿರಿ ಕುಳಿತುಕೊಳ್ಳುವ" ರಾಜ ಮತ್ತು ಪುರೋಹಿತರು ಆಸನದಲ್ಲಿ ಕುಳಿತರು.

"ರಾಜರೆ ! ರಾಣಿಯನ್ನು ಕರೆಸಿರಿ"

"ಏಕೆ ?"

"ಅವಳು ಪಿಶಾಚಿನಿ"

ರಾಜನು ಸ್ತಬ್ಧನಾದ. ಪುರೋಹಿತನನ್ನು ನೋಡಿದ.

"ರಾಜನೆ'' ಆ ಪಿಶಾಚಿಯ ದೆಸೆಯಿಂದ ಅಗ್ನಿಯ ತಾಪ ಲುಪ್ತವಾಗಿದೆ. ಪರಿಚಾರಕರನ್ನು ಕಳುಹಿಸಿ. ರಾಣಿ ಇಲ್ಲಿಗೆ ಬರಬೇಕು !

ರಾಣಿಯು ಬೇಜಾರಿನಿಂದ ಇಚ್ಛೆ ಇಲ್ಲದೆ ಬಲಾತ್ಕಾರವಾಗಿ ಸೇವಕಿಯರೊಡನೆ ಬರುತ್ತಿದ್ದಳು. ಅವಳನ್ನು ರಾಜ ಕ್ರೂರ ದೃಷ್ಟಿಯಿಂದ ನೋಡಿದ. ರಾಣಿಯು ಪುರೋಹಿತರಿಗೆ ವಂದಿಸಿದಳು. ರಾಜನಿಗೂ ಕಾಣದ ಹಾಗೆ ವಂದಿಸಿದಳು. ಅವಳು ಉದ್ವಿಗ್ನಳಾಗಿದ್ದಳು. ಭಯಭೀತಳಾಗಿದ್ದಳು. ಅವಳನ್ನು ನೋಡಿದಾಕ್ಷಣವೇ ಪುರೋಹಿತನು–

"ರಾಣಿಯೆ! ಕುಮಾರನನ್ನು ನೀನು ಗರ್ಭದಲ್ಲಿ ಧರಿಸುತ್ತೀಯೆ. ಆದರ ಪೋಷಣೆಯನ್ನು ಮಾಡುತ್ತೀ. ಕುಮಾರನು ಜನ್ಮತಾಳುತ್ತಾನೆ. ಹುಟ್ಟಿದ ಮೇಲೆ ಜನಗಳು ಅವನನ್ನು ಗುರುತಿಸುತ್ತಾರೆ ಮಗು ತನ್ನ ಮೊದಲನೇ ಅವಸ್ಥೆಯಲ್ಲಿಯೇ ಮುದುಕನಾಗುತ್ತಾನೆ. ತಾಯಿಯಂತಿರುವ ಅರಣಿಯು ಕುಮಾರ ರೂಪ ಅಗ್ನಿಗೆ ಜನ್ಮ ಕೊಡುತ್ತದೆ. ಅದನ್ನು ನಾವು ನಮ್ಮ ಕಣ್ಣುಗಳಿಂದ ನೋಡುತ್ತೇವೆ" ಎಂದು ಹೇಳಿದ

ಅಗ್ನಿಯ ತಾಪವನ್ನು ಕುಮಾರನಿಗೆ ಹೋಲಿಸುತ್ತಾ ರಾಣಿಯನ್ನು ಸಂಬೋಧಿಸಿದ. ರಾಣಿಯು ಉದಾಸೀನಳಾದಳು. ಅವಳ ಮುಖದಲ್ಲಿ ಸ್ಮಶಾನ ಸದೃಶನೀರವತೆ ಇತ್ತು. ಉತ್ತರಿಸಲಾಗಲಿಲ್ಲ ಪಿಶಾಚೀ ರಾಣಿಯನ್ನು ಕುರಿತು ಪುರೋಹಿತನು ಪುನಃ ಹೇಳಿದ.

"ಅಗ್ನಿದೇವ" ಎಂದು ಅಗ್ನಿಯನ್ನು ಸ್ಮರಿಸಿದ. ಮಾನಸಿಕವಾಗಿ ನಮಸ್ಕರಿಸುತ್ತಾ ಹೇಳಿದ.

ಅವರು ತಮ್ಮ ಪ್ರಕಾಶದಿಂದಿದ್ದಾರೆ ಅವರ ಮಹತ್ತಿನಿಂದವೆಲ್ಲವೂ ಪ್ರಕಟವಾಗುತ್ತದೆ. ಅವರು ವೃದ್ಧಿಯನ್ನು ಹೊಂದಿ ರಾಕ್ಷಸರನ್ನು ನಾಶಪಡಿಸುತ್ತಾರೆ. ಅವರ ನಾಶಕ್ಕಾಗಿ ತಮ್ಮ ಜ್ವಾಲೆಗಳನ್ನು ಉದ್ದೀಪನ ಗೊಳಿಸುತ್ತಾರೆ

ರಾಣಿಯು ಭೂತದಂತೆ ನಡುಗುತ್ತಿದ್ದಳು. ಶಕ್ತಿಯನ್ನು ಕಳೆದುಕೊಂಡಿದ್ದಳು. ಅವಳ ಸ್ಥಿತಿಯನ್ನು ರಾಜನೋಡಿದ. ಅವಳೇ ಅಪರಾಧಿ ಎಂದು ತಿಳಿದ. ರಾಜನ ಕಣ್ಣುಗಳು ಕೆಂಪಾದವು ರಾಣಿಯನ್ನು ಶಿಕ್ಷಿಸಲು ಆತುರನಾದ ಪುರೋಹಿತರು ಅಗ್ನಿಯನ್ನು ಆಹ್ವಾನಿಸುತ್ತಾ ಅಂತರ್ಮುಖಿಯಾದರು.

ಅಗ್ನಿದೇವ ತಕ್ಷಣ ಪ್ರತ್ಯಕ್ಷನಾದ ಅವನು ಬರುತ್ತಲೇ ತಾಪವು ಬಂದಿತು. ಅಂಧಕಾರ ಓಡಿತು. ರಶ್ಮಿಗಳು ಪ್ರಕಟವಾದವು ಅಗ್ನಿಯನ್ನು ನೋಡುತ್ತಲೇ ಪಿಶಾಚಿನೀ ಕುಳಿತು ಬಿಟ್ಟಿತು. ಅಗ್ನಿಜ್ವಾಲೆಗಳು ಪಿಶಾಚಿ ರಾಣಿಯ ಕಡೆ ಹೊರಟವು. ರಾಣಿ ಸಹಿಸಲು ಅಸಮರ್ಥಳಾದಳು. ಜ್ವಾಲೆಗಳು ಅವಳನ್ನು ಆವರಿಸಿ ಭಸ್ಮ ಮಾಡಿದವು. ಅಗ್ನಿದೇವನಿಗೆ ಎಲ್ಲರೂ ವಂದಿಸಿದರು, ಜನಗಳು ಹರ್ಷಿತರಾದರು. ಪಿಶಾಚಿಯ ಆತಂಕದಿಂದ ಅರಮನೆ ಶೂನ್ಯವಾಯಿತು.

**ಆಧಾರ ಗ್ರಂಥ**

**ಋಗ್ವೇದ** . ೫-೨, ೫-೨೧- ೫-೨೧-೩

**ಪಂಚವಿಂಶತಿ ಬ್ರಾಹ್ಮಣ** , ೧೩-೩-೧೨.

**ಬೃಹದ್ದೇವತಾ** , ೫-೧೪-೨೩.

**ಟಿಪ್ಪಣಿ :** ನ್ಯಾಯಶಾಸ್ತ್ರದ ದೃಷ್ಟಿಯಲ್ಲಿ ಇದು ಒಂದು ಸೈದ್ಧಾಂತಿಕ ಕಥೆ, ಗಾಡಿ ಅಥವ ರಥವನ್ನು ನಡೆಸುವವ ಸಾರಥಿ ಅಥವಾ ರಥಿಕನೋ ಅಪರಾಧಿ ? ಇವರಲ್ಲಿ ಶಿಕ್ಷೆ ಯಾರಿಗೆ ಕೊಡಬೇಕು ಈ ವಿಚಾರ ಋಗ್ವೇದದ ಕಾಲದಂತೆ ಇಂದೂ ಘರ್ಷಣೆ ಯಾದ ಮೇಲೆ ನಡೆಯುತ್ತಾ ಇದೆ ಇದರ ನಿರ್ಣಯ ನ್ಯಾಯಾಲಯವೇ ಕೊಡುತ್ತದೆ.

**ಇಕ್ಷ್ವಾಕು** , ಇವನು ಒಬ್ಬ ವೈದಿಕ ರಾಜ ಈ ಶಬ್ದವನ್ನು ಇಕ್ಷ್ವಾಕು ವಂಶದ ರಾಜರಿಗೆ ಹೇಳುತ್ತಾರೆ ಇಕ್ಷ್ವಾಕು ರಾಜರ ವಂಶ ಮೂಲತಃ ಪುರು ರಾಜರ ವಂಶವಾಗಿತ್ತು ಎಂಬುದು ಒಂದು ಅಭಿಪ್ರಾಯವಾಗಿತ್ತು ಋಗ್ವೇದದಲ್ಲಿ ಕೇವಲ ಸಂದಿಗ್ಧಾವಸ್ಥೆಯಲ್ಲಿ ಬಂದಿದೆ

**ತ್ರ್ಯರುಣ :** ಇವನೊಬ್ಬ ವೈದಿಕರಾಜ ಇಕ್ಷ್ವಾಕು ಎಂದು ಕರೆದಿದ್ದಾರೆ.

**ವೃಷಜಾನ** ಇವನು ವೃಷಜಾನನ ವಂಶದವನು ಪ್ರಸಿದ್ಧ ಪುರೋಹಿತ. ಇವನಿಗೆ ಜಾನ ಅಥವಾ ವೈಜಾನನ ಎಂದು ಪೈತೃಕ ಹೆಸರು ಬಂದಿದೆ

ಶ್ರೀ ಶ್ರೀ ಶ್ರೀ

## ಶ್ಯಾವಾಶ್ವ

ಒಣ ಹವೆ, ಒಣಗಿದ ಭೂಮಿ, ಶಿತೋಷ್ಣಗಳಿಂದ ಕೂಡಿದ ಪರ್ವತಗಳನ್ನು ಸುತ್ತುವರಿದಿತ್ತು. ಹಸುಗಳಿಂದ ಸ್ಥಳ ತುಂಬಿತ್ತು ಹಸುಗಳ ಪಾಲಕ ರಥ ವೀತಿದಾಲ್ಭ್ಯ ಅಥವಾ ದ್ಯಾರ್ಮನಿದ್ದ ಏಕಾಂತತೆಯನ್ನು ಅರಸುತ್ತಾ ಯಜ್ಞ ಮಾಡಬೇಕೆಂಬ ಪವಿತ್ರ ಭಾವನೆಯಿಂದ ಅವನು ಹೋಗುತ್ತಾ ಇದ್ದ.

ಮಹರ್ಷಿ ಅತ್ರಿಯ ಆಶ್ರಮಕ್ಕೆ ಬಂದ ಆಶ್ರಮದ ವಾತಾವರಣವು ಪವಿತ್ರ ಹಾಗೂ ಪ್ರಶಾಂತವಾಗಿತ್ತು, ಆತ್ಮದರ್ಶನ ಮಾಡಿಕೊಳ್ಳುವುದೇ ಆ ಆಶ್ರಮದ ಕೃಷಿ

ರಥವೀತಿಯು ಮೆಲ್ಲಮೆಲ್ಲನೆ ಆಶ್ರಮವನ್ನು ಪ್ರವೇಶಿಸಿದ. ಋಗ್ವೇದದ ಐದನೇ ಮಂಡಲದ ಋಷಿ ಮಂತ್ರದ್ರಷ್ಟಾ ಆತ್ರೇಯ ಪುತ್ರ ಅರ್ಚನಾನಾನು ಇವ

ನನ್ನು ನೋಡಿದ. ರಾಜ ಋಷಿಯನ್ನು ಅಭಿನಂದಿಸಲು ಮಹರ್ಷಿ ಮೇಲೆದ್ದ. ರಾಜರ್ಷಿ ಮಹರ್ಷಿಗಳ ಸುಂದರ ಸಂಗಮವಾಗಿತ್ತು.

"ರಾಜರ್ಷಿಗಳೆ ! ತಮ್ಮ ಪವಿತ್ರ ದರ್ಶನ..."

"ಮುನಿಗಳೆ! ನನ್ನ ನಮಸ್ಕಾರಗಳನ್ನು ಸ್ವೀಕರಿಸಿ " ಕೈಜೋಡಿಸಿ ನಮಸ್ಕರಿಸಿದ.

"ಅತಿಥಿ ದೇವೋಭವ ಪಾದ್ಯ, ಅರ್ಘ್ಯ ಮಧುಪರ್ಕಗಳನ್ನು ಸ್ವೀಕರಿಸಿ" ಎಂದ ವಿನಯದಿಂದ.

ರಥ ವೀತಿಯು ಮಹರ್ಷಿಯ ವಿನಯಕ್ಕೆ ಮಾರು ಹೋದ. ಋಷಿಯು ಅವನಿಗೆ ಕುಶಾಸನವನ್ನು ಕೊಟ್ಟ ವಿಶ್ರಾಂತಿಗಾಗಿ ನೀರನ್ನು ಕೊಟ್ಟ. ನೀರಿನಿಂದ ಕೈ ಕಾಲು ಮುಖ ತೊಳೆದ ರಥವೀತಿ ಮಧುಪರ್ಕದಿಂದ ತನ್ನ ಶ್ರಮೆಗೆ ತಿಲಾಂಜಲಿ ಇತ್ತ.

"ರಾಜರ್ಷಿ ತಾವು ಬಂದದ್ದು, ಕಳೆದು ಹೋದ ಜಿಪುಣನ ಹಣ ಸಿಕ್ಕಿದಂತಾಗಿದೆ ನನಗೆ ಬಹಳ ಸಂತೋಷವಾಗಿದೆ " ಅರ್ಚನಾನಾನು ಸಹೃದಯತೆಯಿಂದ ಹೇಳಿದ.

"ಮಹರ್ಷಿಗಳೆ ! ಪವಿತ್ರಾತ್ಮಗಳ ದರ್ಶನವಾಗಬೇಕಾದರೆ ಪೂರ್ವ ಜನ್ಮದ ಸುಕೃತವೆ ಸರಿ. ನಾನೂ ಸಹ ನನ್ನ ಪೂರ್ವ ಪುಣ್ಯದ ಉದಯವಾಗಿದೆ ಎಂದು ತಿಳಿಯುವೆ " ರಥ ವೀತಿಯು ನಮ್ರತೆಯಿಂದ ಹೇಳಿದ

"ರಾಜನೆ ! ತಮ್ಮ ಮನೋಭಿಪ್ರಾಯ ತಿಳಿಯಲು ಪ್ರಯತ್ನಿಸಬಹುದೆ ?"

"ಮಹರ್ಷಿ ! ನಾನು ಒಂದು ಯಜ್ಞ ಮಾಡಬೇಕೆಂದಿದ್ದೇನೆ."

"ಒಳ್ಳೆಯ ವಿಚಾರ ರಾಜರೆ"

"ಮಹಾತ್ಮರೆ ! ತಮಗೆ ತೊಂದರೆ ಇಲ್ಲದಿದ್ದರೆ ತಾವು ಯಜ್ಞ. ."

"ನಾನು ಖಂಡಿತವಾಗಿಯೂ ಯಜ್ಞಕ್ಕೆ ಬರುತ್ತೇನ "

"ಅತ್ರಿಕುಲ ನಂದನರೆ ! ಬರುವ ಮಾತಲ್ಲ, ನೀವು ಋತ್ವಿಜರಾಗಬೇಕೆಂದು ಪ್ರಾರ್ಥಿಸುತ್ತೇನೆ "

"ಓಹ್ ! ಮಹರ್ಷಿ ಸಂತಸಗೊಂಡ

"ಮಹರ್ಷಿಗಳೆ ! ತಾವು ಸರ್ವಶಾಸ್ತ್ರ ವಿಶಾರದ ಸರ್ವಜ್ಞ ತಪಸ್ವಿಗಳು. ತಾವು ಐಹಿಕಗಳ ಬೇಕು ಬೇಡಗಳನ್ನು ತ್ಯಜಿಸಿದವರು "

ಋಷಿಯು ತನ್ನ ಪ್ರಶಂಸೆಯಿಂದ ಪ್ರಸನ್ನನಾಗಲಿಲ್ಲ ನಿರ್ವಿಕಾರವಾಗಿ ರಥ ವೀತಿಯ ಮಾತುಗಳನ್ನು ಕೇಳುತ್ತಿದ್ದ

"ತಾವು ಸುಪಾತ್ರರು ತಮ್ಮಿಂದ ಯಜ್ಞವು ಎಲ್ಲಾ ರೀತಿಯಿಂದ ಸಂಪೂರ್ಣವಾಗುತ್ತದೆ"

"ವೈವೆಚ್ಛೆ" ಅರ್ಚನಾನಾನು ತನ್ನ ಇಷ್ಟ ದೈವವನ್ನು ಸ್ಮರಿಸುತ್ತಾ ಹೇಳಿದ. ಸಂಶಯವಿಲ್ಲ ಮಹರ್ಷಿ. ನನ್ನ ಯಜ್ಞೇಚ್ಛೆಯು ಆಶ್ರಮದಲ್ಲಿ ಫಲಿಸಿತು ಇದ

ಕ್ಕಿಂತ ಹೆಚ್ಚಿನದು ಮತ್ತೇನಿದೆ"

"ಪೂರ್ಣಗೊಳ್ಳುತ್ತದೆ ರಾಜರೆ! ನಿಮಗೆ ಐಹಿಕ ಮತ್ತು ಆಮುಷ್ಮಿಕ ಫಲ ಸಿಕ್ಕು ತ್ತದೆ" ಎಂದ ಗಂಭೀರ ವಾಣಿಯಿಂದ

"ಭಗವಾನ್! ಇದೇ ನನ್ನ ಅಪೇಕ್ಷೆ" ರಥವೀಥಿಯು ವಂದಿಸಿದ

ರಾಜರಥವೀತಿಯ ಯಜ್ಞಮಂಟಪ ಶಾಸ್ತ್ರೀಯವಾಗಿ ಸಜ್ಜಾಗಿತ್ತು. ಯಜ್ಞ ಸಿದ್ಧಿ ನಿಮಿತ್ತವಾಗಿ ಮಹರ್ಷಿ ಅರ್ಚನಾನಾ ಬಂದ. ಅವನನ್ನು ಒಬ್ಬ ಭವ್ಯ ಸುಂದರ ಮಯ ಋಷಿ ಅನುಸರಿಸುತ್ತಿದ್ದ ಜನರು ಅವನನ್ನು ನೋಡಿದರು ಅವನು ಮಹರ್ಷಿ ಅರ್ಚನಾನಾ ಮಗ ಅತ್ರಿಯ ಮೊಮ್ಮಗ ಶ್ಯಯಾಸ್ವ ಸಾಂಗೋಪಾಂಗವಾಗಿ ವೇದಾಧ್ಯ ಯನವನ್ನು ತನ್ನ ತಂದೆಯಿಂದ ಪೂರ್ಣಗೊಳಿಸಿದ್ದ. ರಥವೀತಿಯು ತಂದೆ ಮಕ್ಕಳನ್ನು ಸ್ವಾಗತಿಸಿದ. ಅರ್ಚನಾನಾನು ಋತ್ವಿಜನಾದ ಯಜ್ಞವು ಪೂರ್ಣಸಫಲತೆಯನ್ನು ಹೊಂದುವುದನ್ನು ಜನರು ಕಾತರದಿಂದ ನೋಡುತ್ತಿದ್ದರು.

ಯಜ್ಞದಲ್ಲಿ ಹವಿಸ್ಸನ್ನು ಹಾಕುತ್ತಿದ್ದರು ಶ್ರುವಾ (ಚಮಚ)ದಿಂದ ಬೀಳು ತ್ತಿದ್ದ ತುಪ್ಪದಿಂದ ಅಗ್ನಿಜ್ವಾಲೆ ಮೇಲೇಳುತ್ತಿತ್ತು ಗಾಳಿಯಿಂದ ಹೊಗೆ ಹೊರಡು ತ್ತಿತ್ತು. ಅದು ಜನಗಳ ಕಣ್ಣಿನಲ್ಲಿ ನೀರು ತುಂಬಿ ಸುರಿಸುತ್ತಿತ್ತು ಗಾಳಿ ಇಲ್ಲದಾಗ ಹೊಗೆ ಅಗ್ನಿಯಲ್ಲಿ ಸೇರಿ ಸ..ವಾಗಿ ಮೇಲೋಗುತ್ತಿತ್ತು ಯಜ್ಞಮಂಟಪದಲ್ಲಿ ನಿಗ ದಿತ ಸ್ಥಳಗಳಲ್ಲಿ ಎಲ್ಲರೂ ಕುಳಿತಿದ್ದರು ಸ್ವಾಹಾ ಧ್ವನಿಯು ದೇವತೆಗಳನ್ನು ಸ್ಮರಿಸು ತ್ತಿತ್ತು. ಅವರಲ್ಲಿ ಸಹಜವಾಗಿ ಶ್ರದ್ಧೆ ಉಂಟಾಗುತ್ತಿತ್ತು

ಒಂದು ಕಡೆ ರಾಜನ ಮಗಳು ಯಶಸ್ವಿನೀ ಕುಳಿತಿದ್ದಳು. ಅವಳು ಪರಮ ಸುಂದರಿ ಅವಳ ಯೌವನದ ಕಾಂತಿ ಯಜ್ಞಪ್ರಭೆಯಿಂದ ಉಜ್ವಲವಾಗಿತ್ತು ಋಷಿ ಅರ್ಚನಾನಾನು ಅಕಸ್ಮಾತ್ತಾಗಿ ಅವಳನ್ನು ನೋಡಿ ಮುಗ್ಧನಾದ. ಅವನು ಅವಳನ್ನು ತನ್ನ ಪುತ್ರವಧು (ಸೊಸೆ)ವನ್ನಾಗಿ ಮಾಡಿಕೊಳ್ಳಬೇಕೆಂದು ನೋಡುತ್ತಿದ್ದ. ಶ್ಯಯಾ ಶ್ವನು ತನ್ನ ತದೆಂಯ ದೃಷ್ಟಿಬೇರೆ ಕಡೆ ಹರಿದಿದ್ದನ್ನು ನೋಡಿ ಚಕಿತನಾದ ಅವನ ದೃಷ್ಟಿಯನ್ನೇ ಅನುಸರಿಸಿ ಯುವತಿಯನ್ನು ನೋಡಿದ ಅವಳ ಯೌವನ ಸೌಂದರ್ಯ ವನ್ನು ನೋಡಿ ಅವಳಲ್ಲಿ ಆಸಕ್ತನಾದ. ಅವಳ ರೂಪದಿಂದ ಆಕರ್ಷಿತನಾಗಿ "ಇವಳು ನನ್ನ ಪತ್ನಿಯಾದರೆ" ಎಂದು ಅವನ ಮನಸ್ಸು ಆಲೋಚಿಸಿತು

ತಂದೆ ಮಗ ಒಂದೇಸಮನೆ ಅವಳನ್ನೇ ನೋಡುತ್ತಿದ್ದರು. ತಂದೆಗೆ ಇವಳು ನನ್ನ ಸೊಸೆಯಾಗಬೇಕೆಂಬ ಆಸೆ ಮಗನಿಗೆ ಇವಳು ತನ್ನ ಕಾಮಿನಿಯಾಗಬೇಕೆಂಬ ಇಚ್ಛೆ.

"ಋಷಿಕುಮಾರರೆ ! ನಾನು ನಿಮಗೆ ಏನು ಉಪಕಾರ ಮಾಡಲಿ" ಎಂದು ರಥ ವೀತಿಯ ಶ್ಯಯಾಶ್ವನನ್ನು ಕೇಳಿದ ಶ್ಯಯಾಶ್ವನು ಮೌನವಾಗಿದ್ದ, ರಾಜನು ಆಶ್ಚರ್ಯದಿಂದ

"ಆತ್ರೇಯ" ಅವನಿಗೆ ನಾಚಿಕೆಯಾಯಿತು. ಏನೋಹೇಳಲು ಹೋಗಿ

ಹಾಗೆಯೇ ನಿಂತ. ರಾಜನು ಅವನನ್ನು ಪ್ರೋತ್ಸಾಹಿಸುತ್ತಾ.

"ಹೇಳಿ ನಿಮ್ಮ ಬೇಡಿಕೆ ಶುಭವಾಗುವುದು" ಎಂದ.

"ನೀವು ಅನುಮತಿ ನೀಡಿದರೆ ಹೇಳುತ್ತೇನೆ" ವಿನಯದಿಂದ ಹೇಳಿದ.

"ವೇದವಿದರೆ ! ಇದರಲ್ಲಿ ನಾಚಿಕೆ ಏನಿದೆ. ಮನುಷ್ಯರು ತಮಗೆ ಬೇಕಾದುದನ್ನು ಮತ್ತೊಬ್ಬರಲ್ಲಿ ಹೇಳುತ್ತಾರೆ"

ನಾನು ವಿವಾಹವಾಗಬೇಕೆಂದಿದ್ದೇನೆ." ಭೂಮಿಯನ್ನು ನೋಡುತ್ತಾ ಹೇಳಿದ.

"ತಾವು" ಚಕಿತನಾದ ರಾಜ.

"ಹೌದು"

"ಶುಭಕಾರ್ಯ, ಪವಿತ್ರಬಂಧನ. ಶುಭಮುಹೂರ್ತದಲ್ಲಿ ಮಾಡಿಕೊಳ್ಳಿ."

"ತಮ್ಮ ಅನುಮತಿ"

"ನಿಜವಾಗಿಯೂ ವಿವಾಹವು ಒಂದು ಸಂಸ್ಕಾರ ಧರ್ಮವಾಗಿದೆ. ಒಂದುದಿವಸ ಮಾಡಿಕೊಳ್ಳಲೇಬೇಕು" ನಿರ್ವಿಕಾರದಿಂದ ಹೇಳಿದ ರಥವೀತಿ.

"ಆದರೆ ."

"ಹೇಳಿ ಯಾರು ಆ ಸೌಭಾಗ್ಯಶಾಲಿನಿ?" ನಗುತ್ತಾ ಕೇಳಿದ.

"ತಮ್ಮ ರಾಜಕುಮಾರಿ" ಶ್ಯಯಾಶ್ವಮುಖ ತಗ್ಗಿಸಿದ. ನಾಚಿಕೆಯಾಯಿತು. ಹೇಳಬಾರದ್ದನ್ನು ಹೇಳಿಯಾಗಿತ್ತು

ಇದನ್ನು ಕೇಳಿ ರಾಜ ಚಕಿತನಾದ. ಹಲವುಬಾರಿ ಋಷಿಯನ್ನು ಮೇಲಿಂದ ಕೆಳಕ್ಕೆ ನೋಡಿದ. ಏನೋ ಹೇಳಬೇಕೆಂದಿದ್ದ ಅಷ್ಟರಲ್ಲಿ ಮಹರ್ಷಿ ಅರ್ಚನಾನಾನು ಅಲ್ಲಿಗೆ ಬಂದ ರಾಜ ಮತ್ತು ತನ್ನ ಮಗ ಮೌನದಿಂದಿರುವುದನ್ನು ನೋಡಿದ, ರಾಜನ ಪ್ರಶ್ನಾರ್ಥಕ ದೃಷ್ಟಿಯನ್ನು ನೋಡಿ ಏನೂ ತಿಳಿಯದಾದ. ರಾಜನನ್ನೂ ನೋಡಿದ

"ಮಹರ್ಷಿಗಳೆ ಋಷಿ ಶ್ಯಯಾಶ್ವನು ರಾಜಕುಮಾರಿಯನ್ನು ವಿವಾಹವಾಗ ಬೇಕೆಂದು ಇಚ್ಛಿಸಿದ್ದಾನೆ." ಎಂದ

"ಓಹೋ" ಮಹರ್ಷಿ ಪ್ರಸನ್ನನಾದ

ಮಹರ್ಷಿ ನಗುವುದನ್ನು ನೋಡಿ ರಾಜನಿಗೆ ಆಶ್ಚರ್ಯವಾಯಿತು.

"ರಾಜನೆ ! ನಿನ್ನ ಮಗಳನ್ನು ಯಜ್ಞಮಂಟಪದಲ್ಲಿ ನೋಡಿದ್ದೆ. ಇವಳನ್ನು ನನ್ನ ಸೊಸೆಯನ್ನಾಗಿ ಮಾಡಿಕೊಂಡರೆ ಒಳ್ಳೆಯದೆಂದು ಆಲೋಚಿಸಿದೆ" ಶ್ಯಯಾಶ್ವ ನಿಗೆ ತಂದೆಯ ಮಾತನ್ನು ಕೇಳಿ ಸಂತೋಷವಾಯಿತು.

"ಮಹಾತ್ಮರೆ ! ಋಷಿಗಳೊಡನೆ ತನ್ನ ಮಗಳನ್ನು ವಿವಾಹ ಮಾಡಿಕೊಡಲು ಯಾರುತಾನೆ ಅಪೇಕ್ಷಿಸುವುದಿಲ್ಲ. ಇದು ನನ್ನ ಸೌಭಾಗ್ಯವೆಂದು ತಿಳಿಯುತ್ತೇನೆ."

"ರಾಜರೆ ! ನನ್ನನ್ನು ಕೃತಾರ್ಥನನ್ನಾಗಿಸಿದಿರಿ."

"ಮಹರ್ಷಿಗಳೆ ಕೃತಾರ್ಥನಾದದ್ದು ನಾನು."

"ಪಾಣಿಗ್ರಹಣ ಸಂಸ್ಕಾರವು . . . . . ."

"ಆಗಲಿ ಆದರೆ . . . . . ."

"ಆದರೆ, ಅಂದರೆ"

"ರಾಣಿಯನ್ನು ಕೇಳಬೇಕು. ಅವಳ ಅನುಮತಿ ಇಲ್ಲದೆ ಮಾಡಲಾರೆ. ಅವಳು ಕನ್ಯೆಯ ತಾಯಿ ನಾನು ತಂದೆ. ಅವಳು ನನ್ನ ಅರ್ಧಾಂಗಿ. ಪೂರ್ಣಾಂಗದ ಅನುಮತಿಯಿಂದ ಕಾರ್ಯ ಪೂರ್ಣವಾಗುತ್ತದೆ."

"ಆಗಲಿ, ರಾಜರೆ, ರಾಣಿಯ ಅನುಮತಿ ಈ ಕಾರ್ಯದಲ್ಲಿ ಉಚಿತವಾಗುತ್ತದೆ" ತಂದೆ ಮತ್ತು ರಾಜನ ಮಾತಿನಿಂದ ಅಜ್ಞಾತ ಶಂಕೆ ಉಂಟಾಯಿತು.

"ದೇವಿ! ಕನ್ಯೆಯು ವಿವಾಹಕ್ಕೆ ಯೋಗ್ಯಳಾಗಿದ್ದಾಳೆ." ಎಂದ ರಾಜ.

"ಹೌದು" ಆ ವೇಳೆಯಲ್ಲಿ ಕೇಳಿದ್ದರಿಂದ ಚಕಿತಳಾದಳು.

"ಅವಳ ವಿವಾಹಮಾಡುವುದು ಒಳ್ಳೆಯದು."

"ಈ ಪ್ರಶ್ನೆಯನ್ನು ಈಗ ಏಕೆ ಕೇಳುತ್ತಿದ್ದೀರಿ ?"

"ನನಗೆ ಒಬ್ಬ ಯೋಗ್ಯ ವರಸಿಕ್ಕಿದ್ದಾನೆ ಸುಪಾತ್ರ, ವೇದಜ್ಞ ದೃಢಕಾಯ ಸುಂದರನಾಗಿದ್ದಾನೆ " ಎಂದು ನಗುತ್ತಾ ರಾಣಿಯ ಮುಖವನ್ನು ನೋಡಿದ.

"ನಮ್ಮ ಸೌಭಾಗ್ಯ. ಎಲ್ಲಿ ಸಿಕ್ಕಿದ್ದಾನೆ."

"ಇಲ್ಲಿಯೆ ಅವನೆ ತಾನೆ ವಿವಾಹ ವಾಗುವುದಾಗಿ ಹೇಳಿದ್ದಾನೆ." ಆಕಾಶವನ್ನು ನೋಡುತ್ತಾ ಹೇಳಿದ

"ಒಳ್ಳೆಯದು ಯಾರವನು ?"

"ನೀನು ನೋಡಿದ್ದೀಯೆ "

"ನಾನೆ, ಜ್ಞಾಪಕಕ್ಕೆ ಬರುತ್ತಿಲ್ಲ"

"ಋಷಿ ಶ್ಯಯಾಶ್ವ" ಎಂದು ರಾಣಿಯ ಮುಖವನ್ನು ನೋಡಿದ

"ಸಾಧ್ಯವಿಲ್ಲ! ದೃಢಸ್ವರದಿಂದ ಹೇಳಿದಳು ರಾಣಿ

"ಏಕೆ ? ಅವನಲ್ಲಿ ಯಾವ ಅವಗುಣಗಳನ್ನು ಕಂಡೆ."

"ನಾನು ರಾಜರ್ಷಿಯ ಮಗಳು ನನ್ನ ಗಂಡ ರಾಜರ್ಷಿ. ರಾಜರ್ಷಿಯ ಮಗಳು.... ."

"ಅವನೂ ಋಷಿ"

"ಮಂತ್ರ ದ್ರಷ್ಟಾರನಲ್ಲ"

"ಅವನು ದುರ್ಬಲ ಅಳಿಯನಲ್ಲ."

"ಅವನಲ್ಲಿ ಬಲವಿಲ್ಲ ಮಂತ್ರಗಳ ದರ್ಶನ ಅವನಿಗಾಗಿಲ್ಲ."

"ಅವನ ತಾತ ಅತ್ರಿ ಮಹರ್ಷಿ ಮಂತ್ರದ್ರಷ್ಟ ಅವನ ತಂದೆ ಅರ್ಚನಾನಾ ಮಹರ್ಷಿ ಮಂತ್ರದ್ರಷ್ಟಾ."

"ತಾತ ಮತ್ತು ತಂದೆಯ ಜ್ಞಾನ ಪುತ್ರನ ಯಾವ ಕೆಲಸಕ್ಕೆ ಬರುತ್ತದೆ.

ತಂದೆ ತಿಂದ ಭೋಜನ ಮಗ ಮತ್ತು ಮೊಮ್ಮಗನಿಗೆ ಹೊಟ್ಟೆಯಲ್ಲಿ ಜೀರ್ಣಿಸು ತ್ತೇನು ? ಅದರಂತೆ ಜ್ಞಾನವೆಂಬುದು ವಂಶ ಪರಂಪರೆಯಿಂದ ಪುತ್ರ ಮತ್ತು ಪೌತ್ರ ನಿಗೆ ಬರುವುದಿಲ್ಲ."

"ಆದರೆ ...."

"ಅತ್ರಿ ಮಂತ್ರದ್ರಷ್ಟಾರರು, ಅರ್ಚನಾನಾನರು ಮಂತ್ರದ್ರಷ್ಟಾರರು. ಅವರಿಬ್ಬರೂ ಮಂತ್ರಗಳನ್ನು ದರ್ಶನ ಮಾಡಿದ್ದಾರೆ ನಮ್ಮ ಕಣ್ಣುಗಳಿಂದ ನೋಡಿಲ್ಲ. ಶ್ಯಯಾಶ್ವನೂ ನೋಡಿಲ್ಲ ಆದ್ದರಿಂದ ಶ್ಯಯಾಶ್ವನು ಮಂತ್ರದ್ರಷ್ಟಾರನಲ್ಲ "

"ಶುಭೆ ! ಶ್ಯಯಾಶ್ವನು ಜ್ಞಾನಿ, ಬುದ್ಧಿವಂತನಿದ್ದಾನೆ."

"ನನ್ನ ಮಗಳು ವೇದಮಾತೆಯಾಗಬೇಕು ಅವಳ ಪತಿ ಋಷಿಯಾಗಬೇಕು. ಮಂತ್ರದ್ರಷ್ಟಾ ಋಷಿಯೇ ವೇದಪಿತನೆನಿಸಿಕೊಳ್ಳುತ್ತಾನ."

"ಮತ್ತೆ ?"

"ಮತ್ತೇನು ? ನಾವು ನಮ್ಮ ಮಗಳ ವಿವಾಹವನ್ನು ಮಂತ್ರದ್ರಷ್ಟಾರನೊಡನೆ ಮಾಡುತ್ತೇವೆ. ಇಲ್ಲದೇ ಹೋದರೆ ನಮ್ಮ ಅಳಿಯನಾಗಲಾರ ಎಂದು ಅವರಿಗೆ ಹೇಳಿ" ಎಂದಳು.

"ಒಂದು ಪಕ್ಷ ಅವನು ಮಂತ್ರದ್ರಷ್ಟಾರನಾದರೆ ?"

"ಸಂತೋಷದಿಂದ ಕನ್ಯೆಯನ್ನು ಕೊಡಿರಿ." ಎಂದು ಹೇಳಿ ರಾಣಿ ಅರಮನೆಗೆ ಹೋದಳು. ರಾಜನು ಯಜ್ಞಕುಂಡದವರೆಗೆ ಗಂಭೀರವಾಗಿ ನಡೆದ.

"ರಾಜನೆ ! ರಾಣಿ ಕೃಪೆ ಇಟ್ಟು ಅನುಮತಿ ಕೊಟ್ಟಳೆ ?" ಎಂದು ಉತ್ಸುಕತೆ ಯಿಂದ ಕೇಳಿದ ಅರ್ಚನಾನನು.

ಶ್ಯಯಾಶ್ವನ ಹೃದಯ ಒಡೆದುಕೊಳ್ಳುತ್ತಿತ್ತು ರಾಜನ ಮುಖ ಉದಾಸೀನ ವಾಗಿತ್ತು. ಅವನು ಋಷಿಪುತ್ರನನ್ನು ನೋಡಿದ ಅನಂತರ ತಂದೆಯನ್ನು ನೋಡಿದ.

"ಮಹರ್ಷಿಗಳೆ ! ರಾಣಿಯು ಅನುಮತಿ ನೀಡಲಿಲ್ಲ" ಎಂದ. ಮಹರ್ಷಿಗಳಿಗೆ ಬೇಸರವಾಯಿತು. ರಾಜನಿಗೆ ಮಹರ್ಷಿಯನ್ನು ನೋಡಿ ದುಃಖವಾಯಿತು ಋಷಿ ಕುಮಾರನಿಗೆ ನೋವಾಯಿತು ಕಣ್ಣಲ್ಲಿ ನೀರು ಬಂದಿತು. ಮುಖ ಬೇರೆಡೆಗೆ ತಿರುಗಿಸಿದ.

"ರಾಜನೆ ! ಪುತ್ರನಲ್ಲಿ ಏನು ದೋಷವಿದೆ ? ಋಷಿ ಕುಮಾರನೊಡನೆ ರಾಜ ಕುಮಾರಿಯ ವಿವಾಹ ಪ್ರಚಲಿತವಾಗಿದೆ " ಪುತ್ರನನ್ನು ನೋಡುತ್ತಾ ಕೇಳಿದ.

"ದೋಷವೇನಿಲ್ಲ ಋಷಿಗಳೆ ! ಅವನು ಸರ್ವಾಂಗೀಣವಾಗಿ ಉತ್ತಮ ವರ. ಕೇವಲ ಒಂದು ಕಡಿಮೆ.

"ಏನು ?"

"ಅವನು ಮಂತ್ರದ್ರಷ್ಟಾರನಲ್ಲ ವೈದಿಕ ಮಂತ್ರಗಳ ದರ್ಶನವಾಗಿಲ್ಲ ಅವನಿಗೆ. ಆದರೂ ಅವನು ಋಷಿಯಾಗಿದ್ದಾನೆ. ರಾಣಿಯು ಇದನ್ನೇ ಹೇಳಿದ್ದಾಳೆ. ಋಷಿ

ಯಾಗುವುದರಿಂದ ಮಂತ್ರದ್ರಷ್ಟಾರನಾಗುವುದಿಲ್ಲ "

ಶ್ಯಯಾಶ್ವನ ಮುಖ ಬಾಡಿತು ಮಹರ್ಷಿಗಳು ಮಂದಸ್ವರದಲ್ಲಿ "ಇನ್ನೇನಾದರೂ ಇದಯೆ ?" ಎಂದನು

"ಇಲ್ಲ ಮಹರ್ಷಿಗಳೆ"

"ಅವನು ಮಂತ್ರದ್ರಷ್ಟಾರನಾದರೆ"

"ಸಂತೋಷದಿಂದ ವಿವಾಹ ಮಾಡಿಕೊಡುತ್ತೇನೆ "

"ನಿಶ್ಚಯವಾಗಿ"

"ಹೌದು, ಮಾತಿಗೆ ತಪ್ಪುವುದಿಲ್ಲ ನನ್ನ ಮಗಳು ವೇದವಾತೆಯಾಗುತ್ತಾಳೆ ಅವಳ ಪತಿ ವೇದಪಿತನಾಗುತ್ತಾನೆ "

"ಮತ್ತೆ ?"

"ರಾಜರ್ಷಿಗಳೆ ತಂದೆ ತಾಯಿಗಳು ಮಂತ್ರದಷ್ಟಾರನಾಗುವುದು ಒಳ್ಳೆಯದು ದೆಂದು ತಿಳಿಯುತ್ತೇನೆ ಅದು ಯೋಗ್ಯವೂ ಅಹುದು "

ಮಹರ್ಷಿ ಅರ್ಚನಾನಿಗೆ ಬೇಸರವಾಯಿತು ಶ್ಯಯಾಶ್ವನ ಕಣ್ಣುಗಳಿಗೆ ಕತ್ತಲ ಕವಿಯಿತು ಅವನ ಹೃದಯ ಬಡಿದುಕೊಳ್ಳುತ್ತಿತ್ತು

"ಒಳ್ಳೆಯದು ಯಜ್ಞ ಕಾರ್ಯ ಪ್ರಾರಂಭಿಸೋಣ ?"

"ಆಗಲಿ"

ಮಹರ್ಷಿಗಳ ಮನಸ್ಸಿನಲ್ಲಿ ರಾಜನ ವಾಕ್ಯಗಳು ಪ್ರತಿಧ್ವನಿಸುತ್ತಿದ್ದವು ನಿರ್ವಿಕಾರ ಭಾವದಿಂದ ಯಜ್ಞಮಂಟಪಕ್ಕೆ ನಡೆದ ಶ್ಯಯಾಶ್ವನು ಮೂಕನಂತೆ ತಂದೆಯನ್ನು ಅನುಸರಿಸಿದ ರಾಜನಿಗೆ ಅವರನ್ನು ನೋಡಿ ದಯೆ ಬಂತು. ಋಷಿ ಕುಮಾರನ ಮನಸ್ಸಿನಲ್ಲಿ ಸುಂದರ ರಾಜಕುಮಾರಿಯ ಮೂರ್ತಿ ನೆಲೆಸಿತ್ತು ಹೊರಗಿನ ಮೂರ್ತಿಗಳು ಅವನಿಗೆ ನಿರ್ಜೀವ ಮೃಣ್ಮಯಿಗಳಾಗಿದ್ದವು

ಯಜ್ಞವು ಮುಗಿಯಿತು ಮಹರ್ಷಿ ಅರ್ಚನಾನಾ ಮತ್ತು ಶ್ಯಯಾಶ್ವರು ಹತಾಶರಾಗಿ ಆಶ್ರಮದ ಕಡೆ ಹೊರಟರು ಋಷಿ ಕುಮಾರನ ಮನಸ್ಸು ನೊಂದಿತ್ತು ಯಾವುದರ ಬಗೆಗೂ ಮನಸ್ಸಿರಲಿಲ್ಲ ಅವನ ಮನಸ್ಸಿನಲ್ಲಿ ಕನ್ಯೆಯ ವಿವಾಹವನ್ನು ಮಂತ್ರದ್ರಷ್ಟಾರನೊಂದಿಗೆ ಮಾಡುತ್ತೇನೆ ಎಂಬ ರಾಜನ ಮಾತು ಕೊರೆಯುತ್ತಿತ್ತು ತಾನೂ ಮಂತ್ರದ್ರಷ್ಟಾರನಾಗಬೇಕೆಂಬ ನಿರ್ಧಾರಕ್ಕೆ ಬಂದ ತಂದೆ ಮಗನ ನಿರ್ಧಾರಕ್ಕೆ ಪ್ರೋತ್ಸಾಹಿಸಿದ

ಮಾರ್ಗ ಮಧ್ಯದಲ್ಲಿ ವಿದ್ದಶ್ವನ ಮಗ ರಾಜತರಂಗಿ ಮತ್ತು ಋಷಿಗಳಿಗೆ ಪುರುಮೀಢರ ಭೇಟಿಯಾಯಿತು ಅವರಿಬ್ಬರೂ ಋಷಿಗಳಿಗೆ ಆಶ್ರಯದಾತರಾಗಿದ್ದರು. ಇಬ್ಬರೂ ರಾಜರೆ ಆದರೆ ಅವರು ತಮ್ಮ ತಮ್ಮ ಕರ್ಮಾಚರಣೆಯಿಂದ ಋಷಿ ಸಮಾನರಾಗಿದ್ದರು

ಅರ್ಚನಾನಾ ಮತ್ತು ಶ್ಯಯಾಶ್ವನು ಅವರನ್ನು ಸಂಧಿಸಿದರು. ಅವರು ಋಷಿ

ಗಳನ್ನು ಪೂಜಿಸಿ ಸತ್ಕರಿಸಿದರು ತರಂತನ ಪತ್ನಿಯ ಹೆಸರು ಮಹಾರಾಣಿ ಶಶೀಯಸಿ. ರಾಜತರಂತನು ಶ್ಯಯಾಶ್ವನನ್ನು ತನ್ನ ರಾಣಿಯ ಬಳಿ ಕರೆದೊಯ್ದ ರಾಣಿಯನ್ನು ನೋಡಿ ಶ್ಯಯಾಶ್ವನು ಶ್ರದ್ಧೆಯಿಂದ ನಮಸ್ಕರಿಸಿದ ಋಷಿಯನ್ನು ನೋಡಿ ರಾಣಿಗೆ ಅನುಕಂಪವಾಯಿತು. ರಾಣಿಯು ಹಸು, ಮೇಕೆ, ಅಶ್ವ ಕುರಿ ಹಾಗೂ ಪಶುಗಳನ್ನು ಮತ್ತು ಧನವನ್ನು ಅವನಿಗೆ ನೀಡಿದಳು. ಋಷಿಕುಮಾರನು ಅವಳನ್ನು ಪ್ರಶಂಸಿಸಿದ

"ಶಶೀಯಸೀ ದೇವತೆಗಳನ್ನು ಯಾರು ಸ್ತುತಿಸುವುದಿಲ್ಲವೋ, ದಾನಮಾಡುವುದಿಲ್ಲವೋ ಅವರಿಗಿಂತ ನೀನು ಶ್ರೇಷ್ಠಳು ನೀನು ದುಃಖಿಗಳನ್ನು ಬಾಯಾರಿದವರನ್ನು ಧನೇಚ್ಛುಗಳನ್ನು ಗುರುತಿಸುತ್ತೀ ನಿನಗೆ ದೇವತೆಗಳ ಬಗೆಗೆ ಅಗಾಧ ಪ್ರೇಮವಿದೆ. ರಾಣಿಯು ಸಂತೋಷದಿಂದಿದ್ದಳು ಶ್ಯಯಾಶ್ವನಿಗೆ ಎರಡು ಕೆಂಪುಬಣ್ಣದ ಕುದುರೆಗಳನ್ನು ಕೊಟ್ಟಳು ಶ್ಯಯಾಶ್ವನು ಆ ಕುದುರೆಗಳೊಂದಿಗೆ ಪುರುಮೀಢನ ಹತ್ತಿರ ಬಂದ. ಅವನೂ ಸಹ ತರಂತನಂತೆ ನೂರುಹಸುಗಳನ್ನು ಹಾಗೂ ಧನವನ್ನು ಶಯಾಶ್ವನಿಗೆ ಕೊಟ್ಟನು

ತರಂತ ಮತ್ತು ಪುರುಮೀಢರಿಂದ ಪಡೆದ ದಾನಗಳಿಂದ ತಂದೆ ಮಗ ಅತ್ರಿಯ ಆಶ್ರಮಕ್ಕೆ ಬಂದರು ಆಶ್ರಮದಲ್ಲಿ ತೇಜಸ್ವೀ ಮಹರ್ಷಿ ಅತ್ರಿಗೆ ಇಬ್ಬರೂ ನಮಸ್ಕರಿಸಿದರು ಮಹರ್ಷಿಯ ಆಶೀರ್ವಾದವನ್ನು ಪಡೆದು ತಮ್ಮ ಕೆಲಸ ಕಾರ್ಯದಲ್ಲಿ ಮಗ್ನರಾದರು

ಸರ್ವಾಂಗ ಸುಂದರೀ ರಾಜಕುಮಾರಿಯು ಋಷಿಕುಮಾರನ ಮನಸ್ಸಿನಲ್ಲಿ ಅನಾಯಾಸವಾಗಿ ನೆನಪಿಗೆ ಬರುತ್ತಿದ್ದಳು ಆಶ್ರಮದ ವೃಕ್ಷಗಳು ಪ್ರಕೃತಿ ಇವೆಲ್ಲವೂ ಪವಿತ್ರಭಾವನೆಯನ್ನು ಹುಟ್ಟಿಸಲು ಕಾರಣವಾಗಿದ್ದವು ದೈಹಿಕ ಆಕರ್ಷಣೆಯಿಂದ ದೂರವಿರುವಂತೆ ಮಾಡುತ್ತಿದ್ದವು ಆದರೆ ಇಂದು ಇವೆಲ್ಲವೂ ಸ್ತ್ರೀಕಡೆ ಆಕರ್ಷಿತನಾಗಲು ಉತ್ತೇಜಿಸುತ್ತಿದ್ದವು ತುಪ್ಪ ಶರೀರವನ್ನು ದೃಢಪಡಿಸುತ್ತದೆ ಅದೇ ತುಪ್ಪ ಶರೀರವನ್ನು ಸುಡುತ್ತದೆ ತುಪ್ಪ ತಂಪನ್ನುಂಟುಮಾಡಬಲ್ಲದು ಅದರಲ್ಲಿ ಅಗ್ನಿಯು ಗೋಪ್ಯವಾಗಿರುತ್ತದೆ

ಕಲ್ಪನಾಶೀಲವಾದುದೇ ಮನಸ್ಸು ಯೋಗ್ಯ ಕಲ್ಪನೆಗಳನ್ನು ಮಾಡುತ್ತದೆ ಹಾಗೆಯೇ ಕೆಟ್ಟ ಕಲ್ಪನೆಗಳನ್ನೂ ಕೂಡ ಶ್ಯಯಾಶ್ವನ ಚಿತ್ತವೃತ್ತಿಯು ಆ ಸುಂದರಿ ರಾಜಕುಮಾರಿಯ ನೆನಪಿನಲ್ಲಿ ಮುಳುಗಿತ್ತು ಅದರಿಂದ ಮೇಲೇಳಲಾಗಲಿಲ್ಲ ಆಶ್ರಮದ ಶಾಂತಿಯು ಅವನಿಗೆ ಸಮಾಧಾನಪಡಿಸುವಲ್ಲಿ ಅಶಕ್ತವಾಯಿತು ಆಶ್ರಮದ ಯಜ್ಞಾಗ್ನಿಯು ಅವನ ಅಭಿಲಾಶೆಗಳನ್ನು ಸುಡಲಾಗಲಿಲ್ಲ ಆಶ್ರಮದ ವೇದ ಧ್ವನಿಯು ಅವನ ಹೃದಯದಲ್ಲಿ ಹುಟ್ಟಿದ್ದ ಪ್ರೇಮ ಸಂಗೀತವನ್ನು ತಡೆಯಲಾಗಲಿಲ್ಲ ಅವನಿಗೆ ಜಗತ್ತೆಲ್ಲವೂ ರಮಣೀಯವಾಗಿ ಕಾಣತೊಡಗಿತು ಅವನ ಶೀರ್ವಾಸಕ್ತಿಯು ಮನಸ್ಸಿನ ಸಮತೋಲನವನ್ನು ಹಾಳುಮಾಡಿತು ಚಿತ್ತವೃತ್ತಿಯನ್ನು ನಿರೋಧಿಸಬೇಕೆಂದು ಇಚ್ಛಿಸಿದ ಆದರೆ ಒಬ್ಬ ಕಾಮಿಸಿಯ ಕಾಮನೆಗೋಸ್ಕರ ಸಾಧ್ಯವಾಗಲಿಲ್ಲ.

ರಾಜಕುಮಾರಿ ಇಲ್ಲದೆ ತನ್ನ ಜೀವನ ಸಾಧ್ಯವಿಲ್ಲವೆಂದು ನಿರ್ಧರಿಸಿದ ಅದರಿಂದ ಸುಖಶಾಂತಿ ಸಿಕ್ಕಲಾರದು. ಕಮನೀಯ ಕೋಮಲಾಂಗಿ ಇಲ್ಲದೆ ಅವನೊಬ್ಬ ಏಕಾಂಗಿಯಾಗಿದ್ದ

ಅವನ ಮುಂದೆ ಒಂದು ವಿಚಿತ್ರ ಪ್ರಶ್ನೆ ಕಂಬದಂತೆ ಬಂದು ನಿಂತಿತು ರಾಜಕುಮಾರಿಯನ್ನು ಹೇಗೆ ಪಡೆಯುವುದು ? ಅವನ ಮನಸ್ಸು ಮಂತ್ರದ್ರಷ್ಟಾರನಾದ ಮೇಲೆ' ಎಂದಿತು ರಾಜಕುಮಾರಿಯನ್ನು ಹೇಗಾದರೂ ಪಡೆಯಲೇಬೇಕೆಂಬ ಇಚ್ಛೆಯು ತ್ಯಾಗ, ತಪಸ್ಸು ಮಂತ್ರ ದ್ರಷ್ಟಾರನಾಗುವುದಕ್ಕೆ ಪ್ರೇರೇಪಿಸಿತು ಅವನು ನಿರ್ಜನ ಅರಣ್ಯಕ್ಕೆ ಏಕಾಂತದಲ್ಲಿ ಒಂದೇ ಗುರಿಯಿಂದ ಕಾಮಿನಿಯನ್ನು ಪಡೆಯುವ ಉತ್ಕಟೇಚ್ಛೆಯಿಂದ ಹೋದ. ತಪಸ್ಸಿನಲ್ಲಿ ಮಗ್ನನಾದ

ಶ್ಯಯಾಶ್ವನ ತಪಸ್ಸಿನಿಂದ ಅವನ ನಿರ್ಮಲ ಕಣ್ಣುಗಳು ತೆರದವು ಅವನು ತನ್ನಂತೆ ಇರುವ ರೂಪ ರುಕ್ಮದೇವತೆಗಳನ್ನು ನೋಡಿದ ಅದರಲ್ಲಿ ಯಾವ ಚಲನ ವಲನಗಳಿರಲಿಲ್ಲ ಅವನು ದೂಷಿತ ಪ್ರವೃತ್ತಿಯನ್ನು ದಾಟಿ ಬಂದಿದ್ದ. ನಿರ್ಮಲನಾಗಿದ್ದ ಶಾಂತಸ್ವರದಲ್ಲಿ

"ತಾವು ಯಾರು ?" ಎಂದ

ದಿವ್ಯ ಪುರುಷನು ಅವನನ್ನು ಹುಸಿನಗೆಯಿಂದ ನೋಡತೊಡಗಿದ ಶ್ಯಯಾಶ್ವನ ದೃಷ್ಟಿ ಅಂತರ್ಮುಖವಾಯಿತು ಅವನಿಗೆ ಅರಿವಾಯಿತು ಅವರು ಮರುದ್ಗಣಗಳಾಗಿದ್ದರು ಅವನು ಶ್ರದ್ಧೆಯಿಂದ "ಮರುದ್ಗಣಗಳೇ ತಾವು ಅಂತರಿಕ್ಷದಿಂದ ಇಲ್ಲಿಗೆ ಬಂದಿದ್ದೀರಿ ತಮ್ಮ ಕುದುರೆಗಳೆಲ್ಲಿ ? ತಮ್ಮ ಸೈನ್ಯವೆಲ್ಲಿ ? ತಾವು ಹೇಗೆ ಬಂದಿರಿ ? ಶತ್ರುನಾಶಕರೆ ! ವೀರವರರೇ ಭವ್ಯಜನ್ಮರೆ! ಮರುದ್ಗಣಗಳೆ ಕಾದ ತಾಮ್ರದಂತೆ ಹೊಳೆಯುವ ಬಣ್ಣದಿಂದ ಶೋಭಿಸುತ್ತಿದ್ದೀರಿ" ಎಂದ

ಶ್ಯಯಾಶ್ವನು ತಾನು ಮಾಡಿದ ಕಾರ್ಯಕ್ಕೆ ದುಃಖಿಸಿದ ಅವನಿಗೆ ಕಷ್ಟವಾಯಿತು ಸ್ಮರಣೆ ಬಂದಿತು ಅವನು ಸ್ವಾಗತಿಸುವ ಕ್ರಮವನ್ನು ಅತಿಕ್ರಮಿಸಿದ್ದ ಮೊದಲು ಅವರನ್ನು ತಿಳಿದು ಸ್ತುತಿಸದೆ ಯಾರು ? ಎಂದು ಕೇಳಿದ ಇದು ಅವ್ಯವಹಾರಿಕವಾದುದು ಮರ್ಯಾದೆಯಿಂದ ಕೂಡಿದ್ದಲ್ಲ ತನ್ನ ತಪ್ಪು ತಿಳಿದುಕೊಂಡು ಅದನ್ನು ಸರಿಪಡಿಸಲು ಅವರನ್ನು ಸ್ತುತಿಸಿದ

"ಅವರು ಮರುದ್ಗಣಗಳು ಶೀಘ್ರಗಾಮಿ ಅಶ್ವಗಳಲ್ಲಿ ಚಲಿಸುವವರು ಮಧುವನ್ನು ಕುಡಿದ ಯುವಕರು ವಿವಿದ ಪ್ರಕಾರದ ಸ್ತುತಿಗಳನ್ನು ಸ್ವೀಕರಿಸುವವರು ಅವರ ಶುಭ ಆಗಮನವಾಗಿದೆ' ಎಂದು ಶ್ಯಯಾಶ್ವನು ಶ್ರದ್ಧಾಭಕ್ತಿಪೂರ್ವಕವಾಗಿ ಮರುದ್ಗಣಗಳನ್ನು ಪೂಜಿಸಿದ ಅವರು ಸ್ತೋತ್ರದಿಂದ ಸಂತುಷ್ಟರಾದರು. ಮರುದ್ಗಣಗಳು ಆಶೀರ್ವದಿಸಿ ಹೊರಡಲನುವಾದರು ಹೋಗುವಾಗ ರುಕ್ಮವನ್ನು ಕಳಚಿ ಶ್ಯಯಾಶ್ವನಿಗೆ ಕೊಟ್ಟರು ಅವನು ಅಪ್ರಾಪ್ಯ ನಿಧಿಯನ್ನು ಹೊಂದಿ ಹರಸಾವಹಿಸಿ ವಂದಿಸಿದ ಮರುದ್ಗಣಗಳು ಅಂತರ್ಧಾನರಾದರು

ಮಹಾಯಶಸ್ವಿ ಶ್ಯಾವಾಶ್ವನು ಮರುದ್ಗಣಗಳು ಹೋದನಂತರ ಪುನಃ ವಿಚಾರ ಗಳಲ್ಲಿ ಮಗ್ನನಾದ. ಅವನು ಋಷಿಯಾಗಿದ್ದ ಮಂತ್ರದ್ರಷ್ಟಾರನಾಗಿದ್ದ. ಯಾವುದ ಕ್ಕಾಗಿ ತಪಸ್ಸುಮಾಡಿದನೋ ಅದು ಜ್ಞಾಪಕಕ್ಕೆ ಬಂದಿತು ಅವನ ಮನಸ್ಸು ರಥ ವೀತಿಯ ಕನ್ಯೆಯ ಕಡೆ ಹರಿಯಿತು ಮೇಲದ್ದ ರಥವೀತಿಯ ಅರಮನೆ ಕಡೆ ಸಂತೋಷದಿಂದ ಹೊರಟ ರಥವೀತಿ ಮತ್ತು ಅವನ ರಾಣಿ ತಮ್ಮ ವಚನ ಪರಿ ಪಾಲಿಸುವರೆಂಬ ನಂಬಿಕೆ ಇತ್ತು ಮಂತ್ರದ್ರಷ್ಟಾರನಾಗಿದ್ದ ಸೂಕ್ತಗಳನ್ನು ನೋಡಿದ್ದ ಅವನು ತನ್ನ ಕರ್ತವ್ಯವನ್ನ ಪಾಲಿಸಿದ್ದ ರಾಜಕನ್ಯೆಯೊಡನೆ ಪಾಣಿ ಗ್ರಹಣ ಮಾಡಿಕೊಳ್ಳುವ ಸುಮಧುರ ಕಲ್ಪನೆಯಲ್ಲಿ ವೇಗವಾಗಿ ನಡೆಯತೊಡಗಿದ

ಶ್ಯಯಾಶ್ವನು ಹೋಗುತ್ತಾ ಇದ್ದ ಜಾಗ್ರತೆ ತಲಪಬೇಕೆಂದಿದ್ದ ಆದರೆ ಮಾರ್ಗ ಇನ್ನೂ ದೂರವಾಗುತ್ತಿತ್ತು ಮನೋವೇಗದಂತೆ ದಾರಿ ಸಾಗುತ್ತಿರಲಿಲ್ಲ. ರಥವೀತಿಗೆ ತನ್ನ ಮಾತನ್ನು ತಿಳಿಸಲು ಆತುರನಾಗಿದ್ದ ಅವನಿಗೆ ತಕ್ಷಣ ನಾಚಿಕೆ ಯಾಯಿತು. ತನ್ನ ಭಾವೀ ಮಾವನೊಂದಿಗೆ ತಾನೆ ಹೇಳಬಾರದೆಂದುಕೊಂಡ ಆತ್ಮ ಪ್ರಶಂಸೆಯಿಂದ ಭ್ರಮೆಯಾಗಬಹುದು ಯಾರಾದರೂ ದೂತನೊಡನೆ ಸಮಾಚಾರ ತಿಳಿಸಬೇಕೆಂದ ಅನಂತರ ಅವರ ಪ್ರತಿ ಕ್ರಿಯೆ ತಿಳಿಯುವುದೆಂದು ಕೊಂಡ

ದಾರಿಯಲ್ಲಿ ಕತ್ತಲೆಯನ್ನು ಒ[illegible] ಏನೂ ಇರಲಿಲ್ಲ ಅವನು ಮತ್ತು ಅವನ ದಾರಿ ಎರಡೇ ಇದ್ದುದು ರಾತ್ರಿ ದೇವಿಯು ತನ್ನ ತೊಡೆಯ ಮೇಲೆ ಎಲ್ಲರನ್ನೂ ಮಲಗಿಸಿಕೊಂಡು ತಾನೂ ಮಲಗಿದ್ದಳು ಅವನಿಗೆ ಒಂದು ವಿಚಿತ್ರ ಯೋಚನೆ ಹೊಳೆಯಿತು ರಾತ್ರಿ ದೇವಿಯನ್ನೇ ದೂತಳನ್ನಾಗಿಸುವ ಆಲೋಚನೆ ಹೊಳೆಯಿತು ರಾತ್ರಿದೇವಿಯನ್ನು ಸ್ತುತಿಸಿದ.

"ದೇವಿಯೆ! ನನ್ನ ಸ್ತುತಿಯನ್ನು ಮರುತ್ತುಗಳಿಗೆ ತಿಳಿಸು ನಾನು ಸ್ತುತಿಸು ತ್ತೇನೆ ನಿಶಾದೇವಿ! ಹೇಗೆ ರಥಿಕನು ತನ್ನ ವಸ್ತುಗಳು ಸಹಿತ ತನ್ನ ಗಮ್ಯಸ್ಥಾನಕ್ಕೆ ಹೋಗುತ್ತಾನೋ ಹಾಗೆ ನೀನೂ ಸಹ ನನ್ನ ಸ್ತೋತ್ರಗಳನ್ನು ಅವರಿಗೆ ತಲುಪಿಸು ದೇವಿ! ಸೋಮಪಾನದ ಅನಂತರ ನನ್ನ ಇಚ್ಛೆ ಕಡಿಮೆಯಾಗಿಲ್ಲವೆಂದು ರಥವೀತಿಗೆ ತಿಳಿಸು" ಎಂದು ವಿನೀತನಾಗಿ ವಿನಂತಿಸಿದ

"ಶ್ಯಯಾಶ್ವ ನಿನ್ನ ದೌತ್ಯಕಾರ್ಯವನ್ನು ಮಾಡುವೆನು ರಥವೀತಿ ಎಲ್ಲಿದ್ದಾನೆ? ಹೇಳು" ಎಂದು ಗಾಢಾಂಧಕಾರದಲ್ಲಿ ಧ್ವನಿ ಪ್ರತಿಧ್ವನಿಸಿತು ಶ್ಯಯಾಶ್ವನಿಗೆ ಸಂತೋಷ ವಾಯಿತು

"ದೇವಿ ರಥವೀತಿಯು ಗೋಮತೀ ನದೀ ತೀರದಲ್ಲಿದ್ದಾನೆ ಅದು ಹಿಮಾ ಚ್ಛಾದಿತ ಪರ್ವತದಲ್ಲಿದೆ ಎಂದು ಹೇಳಿದ.

"ರಾಜನ' ಕತ್ತಲೆಯಲ್ಲಿ ಧ್ವನಿ ಬಂದಿತು

ರಾಜ ರಥವೀತಿಗೆ ಆಶ್ಚರ್ಯವಾಯಿತು ಧ್ವನಿಬಂದ ಕಡೆ ನೋಡಿದ.

"ನೃಪವರನೆ ! ನಾನು ನಿಶಾದೇವಿ ನನ್ನನ್ನು ನೀನು ನೋಡಲಾರೆ ಅಂಥ ಕಾರವೇ ನನ್ನರೂಪ "

ರಾಜನು ಎದ್ದುನಿಂತ ತನ್ನ ನಾಲ್ಕೂ ಕಡೆ ಘೋರ ಅಂಧಕಾರವಿತ್ತು

ನಮಸ್ಕರಿಸಿ "ಏನಾಗಬೇಕು ದೇವಿ ?" ಎಂದ

"ಪೃಥ್ವೀಪತಿಯೆ ! ನಾನು ಶುಭ ಸಮಾಚಾರ ಹೇಳಲು ಬಂದಿದ್ದೇನೆ" ಎಂದಳು

"ಅನುಗೃಹೀತನಾಗುತ್ತೇನೆ " ರಾಜನು ವಿನಯದಿಂದ ಹೇಳಿದ

"ನಾನು ಶ್ಯಯಾಶ್ವನ ದೂತಿಯಾಗಿ ಬಂದಿದ್ದೇನೆ "

ರಾಜ ಚಕಿತನಾದ

"ನಿನ್ನ ಅಳಿಯ ಮಂತ್ರದ್ರಷ್ಟಾರನಾಗಿದ್ದಾನೆ "

ನಿಶಾದೇವಿಯು ನಗುತ್ತಿರುವಂತೆ ರಾಜನಿಗೆ ಭಾಸವಾಯಿತು

ಅದನ್ನು ಕೇಳಿ ರಾಜನಿಗೆ ಸಂತೋಷವಾಯಿತು

"ದೇವಿ ಮತ್ತೇನು ಆಜ್ಞೆ"

"ಅವನು ತನ್ನ ಕರ್ತವ್ಯವನ್ನು ಪಾಲಿಸಿದ್ದಾನೆ ತಾವು ತಮ್ಮ ವಚನವನ್ನು ಪಾಲಿಸುತ್ತೀರೋ ?"

"ಅವಶ್ಯವಾಗಿ ದೇವಿ" ರಾಜನು ದೃಢಮನಸ್ಸಿನಿಂದ ಹೇಳಿದ

"ಇದರಿಂದ ನಿಮ್ಮ ಸಂಬಂಧ ಮಂಗಲಕರವಾಗುವುದು ರಾಜನೆ "

ನಿಶಾದೇವಿ ಮಾಯವಾದಳು ರಾಜನಿಗೆ ಸಂತೋಷವಾಯಿತು

ಮಂಗಲಸೂತ್ರಕ್ಕೆ ಒಂದು ಅಡ್ಡಿ ಇತ್ತು ಅದು ದೂರವಾಯಿತು

"ಮಹಾತ್ಮನೆ !" ರಥವೀತಿಯು ಅರ್ಚನಾನಸ ಪಾದಗಳನ್ನು ಮುಟ್ಟಿ ನಮಸ್ಕರಿಸಿದ ರಾಜನ ಹಿಂದೆ ನಾಚಿಕೆಯಿಂದ ತಲೆ ಬಾಗಿಸಿ ನಿಂತಿದ್ದ ರಾಜಕನ್ಯೆಯನ್ನು ಅರ್ಚನಾನಾ ನೋಡಿದ

"ರಾಜನೆ ! ಪುತ್ರಿಯು ಕುಶಲದಿಂದಿದ್ದಾಳೆಯೇ ? ತನ್ನ ಭಾವೀ ಪುತ್ರ ವಧುವನ್ನು ನೋಡುತ್ತಾ ಹೇಳಿದ

ರಾಜಕುಮಾರಿಯು ಮಹರ್ಷಿಗಳ ಪಾದ ಪದ್ಮಗಳಿಗೆ ಶಿರವನ್ನು ತಾಗಿಸಿದಳು ಮಹರ್ಷಿಯು ಅವಳ ಮಸ್ತಕವನ್ನು ಮುಟ್ಟಿ ಆಶೀರ್ವಾದ ಮಾಡಿದ ಅವನ ಮನಸ್ಸು ಪ್ರಸನ್ನವಾಗಿತ್ತು ರಥವೀತಿಯು ಸ್ವಲ್ಪನಾಚಿಕೆಯಿಂದ

"ಮಹಾತ್ಮರೆ ! ತಾವು ಈ ರಾಜಕನ್ಯೆಯನ್ನು ಪುತ್ರ ವಧುವನ್ನಾಗಿಮಾಡಿ ಕೊಳ್ಳಬೇಕೆಂದು ಅಪೇಕ್ಷಿಸಿದ್ದಿರಿ ನಾನು ರಾಣಿಯ ಸಮ್ಮತಿಯಂತೆ ಅಜ್ಞಾನವಶದಿಂದ ತಿರಸ್ಕರಿದ್ದೆ." ಎಂದು ರಥವೀತಿಯು ಹೇಳಿದ

"ರಾಜನೆ ! ಅದರಿಂದ ಉಪಕಾರವೇ ಆಯಿತು ಶ್ಯಾವಾಶ್ವ ಮಂತ್ರದ್ರಷ್ಟಾರನಾದ ' ರಾಜಕುಮಾರಿಗೆ ನಾಚಿಕೆ ಆಯಿತು ರಥವೀತಿಯು ಕೈ ಮುಗಿದುಕೊಂಡು

"ನನ್ನ ಅಜ್ಞಾನವನ್ನು ಕ್ಷಮಿಸಬೇಕು" ಎಂದು ಪ್ರಾರ್ಥಿಸಿದ

"ರಾಜನೆ ಇದರಲ್ಲಿ ಕ್ಷಮೆ ಎಲ್ಲಿಂದ ಬಂತು "

"ಭಗವನ್ ! ತಾವು ಋಷಿ ಪುತ್ರರು ಸ್ವಯಂ ಋಷಿಗಳು ಋಷಿಗಳ ತಂದೆ ನನ್ನ ನಮಸ್ಕಾರಗಳನ್ನು ಸ್ವೀಕರಿಸಿ" ಎಂದು ವಂದಿಸಿದ

"ರಾಜನೆ !" ನಾನು

"ಆತ್ರೇಯ . ರಥವೀತಿಯು ಮಧ್ಯದಲ್ಲಿಯೇ ತಡೆದು

"ತಮ್ಮ ಪುತ್ರ ವಧು ಇಲ್ಲಿದ್ದಾಳೆ

ರಾಜಕುಮಾರಿಯು ಪುನಃ ಶ್ರದ್ಧಾಪೂರ್ವಕವಾಗಿ ಶಿರಸ್ಸನ್ನು ಋಷಿಯ ಪಾದಗಳ ಮೇಲ ಇಟ್ಟಳು

"ರಾಜನೆ ! ಯಾರು ತಾನೆ ಇವಳನ್ನು ಸೊಸೆಯನ್ನಾಗಿ ಮಾಡಿಕೊಳ್ಳುವುದಿಲ್ಲ" ಮಹರ್ಷಿ ಪ್ರೇಮದಿಂದ ಅವಳ ಶಿರಸ್ಸಿನ ಮೇಲೆ ಅಭಯ ಮುದ್ರೆಯನ್ನಿಟ್ಟು ಆಶೀರ್ವದಿಸುತ್ತಾ ಹೇಳಿದ

ರಾಜನು ತಾನೇ ಪಾದ್ಯ, ಅರ್ಘ್ಯ ಮಧುಪರ್ಕಗಳಿಂದ ಋಷಿಯನ್ನು ಪೂಜಿಸಿದ. ಅವನಿಗೆ ಒಂದು ನೂರು ಬಿಳಿ ಕುದುರೆ[illegible] ಕೊಟ್ಟ. ಋಷಿಗೆ ಸಂತೋಷವಾಯಿತು. ಮಹರ್ಷಿ ಮತ್ತು ರ[illegible]ಗಳು ಪರಸ್ಪರ ಆಲಿಂಗಿಸಿಕೊಂಡರು ಅವರು ಸಂಬಂಧ ಸೂತ್ರದಲ್ಲಿ ಬಂಧಿತರಾದರು ಋಷಿಗಳು ಪುಲಕಿತರಾದರು ಕನ್ಯೆ ಸಂತೋಷಗೊಂಡಳು ಶ್ಯಾವಾಶ್ವ[illegible] ತನ್ನ ಕರ್ಮದಿಂದ ಸೌಭಾಗ್ಯ ಶಾಲಿಯಾದ ಕನ್ಯೆಯನ್ನು ಪಡೆದ.

ಆಧಾರ ಗ್ರಂಥ :

ಋಗ್ವೇದ ೯-೭೫೧-೨, ೧-೧೮೩-೫, ೪-೪೯-೭೮, ೫-೫೦-೮೧, ೫-೫೪-೭, ೧೦-೨-೫೨-೪, ೫-೬೧-೫, ೫-೬೩-೬೪, ೫-೬೧-೧೭, ೫-೮೧-೫ ೨೨, ೮-೩೫-೩೮, ೮-೩೫-೧೯, ೮-೩೬-೭, ೮-೩೭-೭, ೮-೩೮-೮, ೯-೫-೯-೩೨, ೯-೫೮-೩

ಅಥರ್ವವೇದ , ೪-೨೯-೪, ೧೮-೩-೧೫

ಶತಪಥ ಬ್ರಾಹ್ಮಣ ೭-೪

ಪಂಚವಿಂಶತಿಬ್ರಾಹ್ಮಣ ೮-೫-೯

ಬೃಹದ್ದೇವತಾ ೫-೫೦-೯೦

ಟಿಪ್ಪಣಿ ವಿವಾಹ ಪದ್ಧತಿಯ ಬಗೆಗೆ ಈ ಕಥೆ ಒಂದು ನಿದರ್ಶನ ತಾನು ಅಪೇಕ್ಷಿಸಿದ ಕನ್ಯೆಯೊಡನೆ ವಿವಾಹವಾಗಲು ವರನು ತನ್ನ ಕರ್ಮಗಳಿಂದ ಯೋಗ್ಯನಾದಾಗ ಮಾತ್ರ ತಂದೆ ತಾಯಿಗಳು ಕನ್ಯೆಯನ್ನು ಕೊಡುತ್ತಿದ್ದರು ವಿವಾಹವಾಗಬೇಕಾದರೆ ವರನಲ್ಲಿ ಶ್ರೇಷ್ಠ ಗುಣಗಳಿರಬೇಕಿತ್ತು ವರ ಮತ್ತು ವಧುವಿನಲ್ಲಿ ಸಮಾನ ಗುಣಗಳಿರಬೇಕಾಗುತ್ತಿತ್ತು.

ಯಾವುದಾದರೂ ಪಣ ಒಡ್ಡುತ್ತಿದ್ದರು ವರನು ಅದನ್ನು ಪೂರ್ತಿಮಾಡಿದಾಗ ಕನ್ಯೆಯನ್ನು ಕೊಡುತ್ತಿದ್ದರು ರಾಮನೂ ಸಹ ಇಂಥಹ ಪಣವನ್ನು ಎದುರಿಸಬೇಕಾಯಿತು ಇಲ್ಲಿಯೂ ಸಹ ತಂದೆ ತಾಯಿಗಳ ಅಭಿಪ್ರಾಯಕ್ಕೆ ಪ್ರಾಶಸ್ತ್ಯವನ್ನು ಕೊಡಲಾಗಿದೆ ಕನ್ಯೆಯ ತಂದೆ ತಾಯಿಗಳ ಅಭಿಪ್ರಾಯದಂತೆ ವಿವಾಹವಾಗಬೇಕಿತ್ತು

ಅತ್ರಿ ಇವನು ಇತಿಹಾಸ ಪುರುಷನೆಂಬುವುದರಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಅತ್ರಿ ಹಾಗೂ ಅವನ ವಂಶಜರು ಋಗ್ವೇದದ ಐದನೇ ಮಂಡಲದ ಋಷಿಗಳಾಗಿದ್ದಾರೆ ಈ ಮತ ಪರುಷ್ಣೀ ಹಾಗೂ ಯಮುನಾ ನದಿಯವರೆವಿಗೆ ಹರಡಿತ್ತು ಅತ್ರಿಯು ಸೂಕ್ತದ್ರಷ್ಟಾರನಾಗಿದ್ದ ಇವನನ್ನು ಪಾಂಚಜನ್ಯನೆಂದು ಕರೆದಿದ್ದಾರೆ ಅತ್ರಿ ಗೋತ್ರದ ಸೂಕ್ತಕಾರರ ವರ್ಣನೆಯು ಋಗ್ವೇದದಲ್ಲಿ ಬಂದಿದೆ

ಅರ್ಚನಾನಸ್ ಶ್ಯಯಾಶ್ವನ ತಂದೆ ಎಂದು ತಿಳಿಯುತ್ತದೆ. ಇವನೂ ಸಹ ಸೂಕ್ತದ್ರಷ್ಟಾರ

ತರಂತ ಶ್ಯಾವಾಶ್ವನ ಆಶ್ರಯದಾತನಾದ ರಾಜ ವಿದ್ದಶ್ವನ ಕ್ಷತ್ರಿಯ ಪುತ್ರ ವೈದದಶ್ವಿ ಇವನ ವೈತೃಕನ ಹೆಸರು ಪುರುಮೀಢನ ಸಹೋದರ

ಪುರುಮೀಢ ಇವನು ಒಬ್ಬ ಪ್ರಾಚೀನ ಋಷಿ ಇವನನ್ನು ವಿದ್ದಶ್ವನ ಮಗನೆಂದಿದ್ದಾರೆ

ರಥವೀತಿ ಇವನು ದರ್ಭವಂಶದವನು ಇವನನ್ನು ದಾರ್ಭ್ಯ ಅಥವಾ ದಾಲ್ಭ್ಯನೆಂದು ಕರೆಯುತ್ತಾರೆ ಹಿಮಾಲಯದ ನಿವಾಸಿ ಕಾಲಾಂತರದಲ್ಲಿ ಇವನನ್ನು ರಾಜನೆಂದು ಕರೆದರು ಇವನ ಮಗಳೊಂದಿಗೆ ಶಯಾಶ್ವನ ವಿವಾಹವಾಗಿತ್ತು.

ವೈದದಶ್ವಿ ತರಂತ, ಪುರುಮೀಢ ಹಾಗೂ ರಥವೀತಿಯು ಇವನ ಮಕ್ಕಳು. ಇವನೊಬ್ಬ ರಾಜ

ಶಶೀಯಸಿ ಇವಳು ತರಂತ ರಾಜನ ಪತ್ನಿ

ಶ್ಯಯಾಶ್ವ ಋಗ್ವೇದದ ಐದನೇ, ಎಂಟನೇ, ಹಾಗೂ ಒಂಬತ್ತನೇ ಮಂಡಲದ ಅನೇಕಸೂಕ್ತಗಳು ಶ್ಯಯಾಶ್ವನಿಂದ ಉಕ್ತವಾದವುಗಳು ಇವನು ಅರ್ಚನಾನಸ ಮಗ ಇವನಿಗೆ ಶ್ಯಾವಾವತ ಎಂಬ ಹೆಸರೂ ಉಂಟು.



# ಸಪ್ತವಧ್ರಿ

ಅಶ್ವಮೇಧ ಭರತವಂಶದ ರಾಜ ಅವನಿಗೆ ಮಕ್ಕಳಿರಲಿಲ್ಲ ಪುತ್ರಸಂತಾನ ಕ್ಕಾಗಿ ಸಪ್ತವಧ್ರಿ ಋಷಿಯಿಂದ ಏಳು ಸಾರಿ ಸಹಾಯ ಪಡೆದ ಆದರೆ ಋಷಿಗೆ ಫಲ ಸಿಗಲಿಲ್ಲ ರಾಜನಿಗೆ ಪುತ್ರ ಸಂತಾನವಾಗಲಿಲ್ಲ ಅವನು ಎಂಟನೆ ಸಾರಿಯೂ ಸಹಾಯ ಪಡೆದ ಆದರೂ ಪುತ್ರ ಸಂತಾನವಾಗಲಿಲ್ಲ ಋಷಿಯು ವಿಫಲನಾದ ರಾಜನಿಗೆ ಕೋಪ ಬಂದಿತು ಋಷಿಯನ್ನು ಮರದ ಪೆಟ್ಟಿಗೆಯಲ್ಲಿಟ್ಟು ಒಂದು ಹಳ್ಳದಲ್ಲಿ ಬಿಸಾಡಿದ. ಅಲ್ಲಿಯೇ ರಾತ್ರಿಯವರೆವಿಗೆ ಋಷಿ ಇದ್ದ ತನ್ನ ದಯನೀಯ ಸ್ಥಿತಿಯ ಅನುಭವವಾಯಿತು ಮುಕ್ತನಾಗಲು ಅವನಿಗೆ ಉಪಾಯ ಹೊಳೆಯಲಿಲ್ಲ. ತನ್ನ ಸ್ವಾಮಿ ಶುಭಸ್ತುತಿಯನ್ನು ಸ್ತೋತ್ರ ಮಾಡಿದ

"ಅಶ್ವಿನಿ ! ದಯೆಯಿಟ್ಟು ಇಲ್ಲಿಗೆ ಬನ್ನಿ ನಾಸತ್ಯ ಅಪ್ರಸನ್ನನಾಗಬೇಡ ನಿರ್ಮಲವಾದ ನೀರಿನಲ್ಲಿ ಎರಡು ಹಂಸಗಳು ಇಳಿಯುವಂತೆ ತಾವು ದಯೆಮಾಡಿ. ಅಶ್ವಿನಿ ! ಯಥೇಷ್ಟ ಅನ್ನವಿದೆ ತಾವು ಇಲ್ಲಿಗೆ ದಯೆಮಾಡಿರಿ ಪತ್ನಿಯು ನಮ್ರತೆ ಯಿಂದ ತನ್ನ ಪತಿಯನ್ನು ಸಂತೋಷಗೊಳಿಸುತ್ತಾಳೆ ಸ್ತೋತ್ರಗಳಿಂದ ಪ್ರಸನ್ನರಾಗಿ ಅತ್ರಿಯ ಕುಂಡವನ್ನು ತಂಪುಮಾಡಿರಿ ನವೋತ್ಪನ್ನ ಗಿಡುಗನು ವೇಗದಿಂದ ಬರು ವಂತೆ ತಾವು ತಮ್ಮ ಮಂಗಳಮಯ ರಥದಲ್ಲಿ ಕುಳಿತುಬನ್ನಿ ಗರ್ಭಿಣಿಸ್ತ್ರೀಯ ಗರ್ಭ ದಿಂದ ಪ್ರಸವಿಸಿದ ಮಗು ಮುಕ್ತವಾಗುವಂತೆ ಈ ಕಾರಗೃಹದಿಂದ ನನ್ನನ್ನು ಮುಕ್ತ ವಾಗುವಂತೆ ಈ ನನ್ನನ್ನು ಮುಕ್ತಗೊಳಿಸಿ ಸಪ್ತವಧ್ರಿಯು ತನ್ನ ಅಮುಕ್ತಾವಸ್ಥೆ ಯನ್ನು ಗರ್ಭಸ್ಥ ಶಿಶುವಿಗೆ ಹೋಲಿಸುತ್ತಾ ಹೇಗೆ ಗಾಳಿಯು ಬೀಸಿ ಸರೋವರದ ನೀರನ್ನು ಎಲ್ಲೆಡೆಗೆ ಒಯ್ಯುತ್ತದೆಯೋ ಅದೇ ರೀತಿ ಗರ್ಭದಲ್ಲಿರುವ ಶಿಶು ಮಾಸಗಳು ತುಂಬಿದ ಮೇಲೆ ಹೊರಗೆ ಬರಲಿ ವನ ಮತ್ತು ಸಮುದ್ರಗಳು ಕಂಪನಗೊಳ್ಳು ತ್ತವೆ ಹಾಗೆ ಗರ್ಭಸ್ಥ ಶಿಶು ಕಂಪನಗೊಳ್ಳುತ್ತಾ ಗರ್ಭದಿಂದ ಹೊರಗೆ ಬರಲಿ ಹತ್ತು ತಿಂಗಳು ಗರ್ಭದಲ್ಲಿದ್ದ ಶಿಶು ಜೀವಿತ ತಾಯಿಯ ಗರ್ಭದಿಂದ ಹೊರಗೆ ಬರಲಿ." ಸ್ತುತಿಸುತ್ತಾ ಗರ್ಭದಲ್ಲಿದ್ದ ಶಿಶುವಿನಂತೆ ಚೈತನ್ಯದಿಂದ ಕಂಪನಗೊಳ್ಳುತ್ತಾ ಜೀವಿ ಸುತ್ತಾ ಸಪ್ತವರ್ಧಿಯು ನಿದ್ರೆಹೋದ "

ಮಳೆ ಸುರಿಸುವ ಅಶ್ವಿನಿಗಳು ತಮ್ಮ ಆಶ್ರಿತನಾದ ಸಪ್ತವಧ್ರಿಯನ್ನು ನೋಡಿ ಪ್ರಸನ್ನರಾದರು ಗರ್ಭದಲ್ಲಿರುವ ಶಿಶು ಗರ್ಭದಿಂದ ಮುಕ್ತವಾಗಿ ಹೊರಗೆ ಬರು ವಂತೆ ಮರದ ಪೆಟ್ಟಿಗೆಯಿಂದ ಸಪ್ತವಧ್ರಿಯನ್ನು ಮುಕ್ತಗೊಳಿಸಿದರು ಸಪ್ತ ಇಂದ್ರಿಯಗಳನ್ನು ಸ್ತಬ್ಧ ಮಾಡುವ ಸೂಕ್ತದ್ರಷ್ಟಾ ಅಶ್ವಿನಿಗಳ ಕೃಪೆಗೆ, ಪಾತ್ರನಾದ ಸಪ್ತವಧ್ರಿಯು ತನ್ನ ಸುತ್ತಿಯ ಮಹಿಮೆಯಿಂದ ಮುಕ್ತನಾದ.

**ಆಧಾರ ಗ್ರಂಥ :-**

**ಋಗ್ವೇದ : ೫-೭೫-೭೮, ೫-೭೮-೫೯, ೫-೭೩-೯,**
೮-೯೨, ೧೦-೩೯-೯೦
**ಅಥರ್ವವೇದ : ೪-೨೯-೪**
ಬೃಹದ್ದೇವತಾ :-೫-೮೨-೮೫

**ಟಿಪ್ಪಣಿ** ಮೊದಲನೆಯ ಪಾಠದಲ್ಲಿ ಕೇಳಿರುವ ಕಥೆ ವೇದದಲ್ಲಿ ಇಲ್ಲ ಕಥೆಯನ್ನು ಪುಷ್ಟಿಗೊಳಿಸಲು ಬೃಹದ್ದೇವತಾಭಾಗದಿಂದ ತೆಗೆದುಕೊಂಡಿದೆ ಕಥೆಯ ವೈದಿಕ ಅಂಶ ಎರಡನೇ ಪಾಠದಿಂದ ಪ್ರಾರಂಭವಾಗುತ್ತದೆ ವೈದಿಕ ಆಖ್ಯಾನವು ಮೂಲವೆಂದು ತಿಳಿಯಲು ಎರಡನೆಯ ಪಾಠವನ್ನು ನೋಡಲು ಓದಿಕೊಳ್ಳಬೇಕು ಲೇಖಕನು ಕಥೆಯು ಸುಂದರವಾಗಲೆಂದು ಈ ಅಂಶವನ್ನು ಬೃಹದ್ದೇವತೆಯಿಂದ ತೆಗೆದುಕೊಂಡಿದ್ದಾನೆ ಇಲ್ಲಿ ಗರ್ಭ ಹಾಗೂ ಅನುಕಾವಸ್ಥೆಯನ್ನು ತುಲನೆ ಮಾಡಲಾಗಿದ ಗರ್ಭಸ್ಥ ಶಿಶು ಸಂಕಟದಿಂದ ಪಾರಾಗಲು ವೈದ್ಯರ ನೆರವು ಪಡೆಯಬೇಕಾಗುತ್ತಿತ್ತು

**ಅಶ್ವಮೇಧರಾಜ** : ಒಬ್ಬ ವೈದಿಕ ಕಾಲದ ರಾಜ

**ಭರತವಂಶ** ಭರತ ಎಂಬುದು ಒಂದು ಜನ ಸಮೂಹ ಋಗ್ವೇದದಲ್ಲಿ ಏಳನೇ ಮಂಡಲದಲ್ಲಿ ಸುದಾಸನ ಹಾಗೂ ತತ್ಸುವುಗಳ ಪ್ರಸಂಗದಲ್ಲಿ ಇದರ ಉಲ್ಲೇಖವಿದೆ ತತ್ಸುಗಳು ಭರತರನ್ನು ಸೋಲಿಸಿದ್ದರು ಅವರು ಪುರಜನಗಳಿಗೂ ಭರತರು ಶತ್ರುಗಳಾಗಿದ್ದರು ಋಗ್ವೇದದ ಮೂರನೇ ಹಾಗೂ ಏಳನೇ ಮಂಡಲದಲ್ಲಿ ಸುದಾಸ ಹಾಗೂ ತತ್ಸುವುಗಳು ಸಂಬಂಧವಾಗಿ ಹೇಳಲಾಗಿದೆ ಋಗ್ವೇದದಲ್ಲಿ ವಿಶ್ವಾಮಿತ್ರನಿಗೆ 'ಜನತೆಯಲ್ಲಿ ವೃಷಭ' ಆದ್ದರಿಂದ ಭರತರಲ್ಲಿ ಶ್ರೇಷ್ಠರೆಂದಿದ್ದಾರೆ ಋಗ್ವೇದದಲ್ಲಿ ಅಗ್ನಿ ಭರತಗೆ, ಭಾರತ ಅಗ್ನಿ ಎಂಬ ಅರ್ಥದಲ್ಲಿ ಮತ್ತು ಭಾರತೀ ಪ್ರಯೋಗ ಭರತರ ದೇವಿಯೆಂದು ಹೇಳಿವೆ

**ಸಪ್ತವಧ್ರಿ** : ಅಶ್ವಿನಿಗಳ ಕೃಪಾಪಾತ್ರ, ಅವರು ಇವನನ್ನು ಮುಕ್ತಗೊಳಿಸಿದರು. ಇವನನ್ನು ಕೆಲವು ವಿದ್ವಾಂಸರು ಅತ್ರಿಯೆಂದು ಒಪ್ಪುತ್ತಾರೆ

   

## ಭೃಗು, ಅಂಗಿರಸ ಮತ್ತು ಅತ್ರಿಯ ಜನ್ಮ

ಇದು ಒಂದು ಕಥೆ ಪ್ರಜೆಗಳನ್ನು ಹುಟ್ಟಿಸಬೇಕೆಂದು ಪ್ರಜಾಪತಿಗೆ ಇಚ್ಛೆ ಉಂಟಾಯಿತು ಇಚ್ಛಾಪೂರ್ತಿಗಾಗಿ ಒಂದು ಯಜ್ಞ ಮಾಡಬೇಕೆಂದು ಪ್ರಜಾಪತಿಯು

ಆಲೋಚಿಸಿದ ಆದುದರಿಂದ ಸಾಧ್ಯರು ಮತ್ತು ವಿಶ್ವದೇವತೆಗಳೊಡನೆ ಸೇರಿ ಮೂರು ವರ್ಷದ ಯಜ್ಞಕಾರ್ಯಕ್ರಮವನ್ನು ಸಿದ್ಧಪಡಿಸಿದನು

ಯಜ್ಞ ಪ್ರಾರಂಭವಾಯಿತು ದೀಕ್ಷಾ ಸಮಯದಲ್ಲಿ ವಾಕ್ ದೇವತೆಯು ಯಜ್ಞಮಂಟಪದಲ್ಲಿ ಪ್ರತ್ಯಕ್ಷಳಾದಳು, ಬಹಳ ಸುಂದರಿಯಾಗಿದ್ದಳು ಯಾರನ್ನಾದರೂ ಮೋಹಗೊಳಿಸುವಂತಿದ್ದಳು ಅವಳ ಶರೀರದಲ್ಲಿ ಯೌವನದ ಮಾದಕತೆ ಇತ್ತು ಪ್ರಜಾಪತಿ ಮತ್ತು ವರುಣರರು, ಅವಳನ್ನು ನೋಡಿದ ು ಅವರಿಬ್ಬರ ವೀರ್ಯ ಸ್ಖಲನವಾಯಿತು ಆ ವೀರ್ಯವನ್ನು ಏನು ಮಾಡಬೇಕೆಂಬ ಪ್ರಶ್ನೆ ಹುಟ್ಟಿತು ಅವರಿಬ್ಬರೂ ನಾಚಿಕೆಯಿಂದ, ವಾಯುವನ್ನು ನೋಡಿದರು ವಾಯು ಶುಕ್ಲವನ್ನು ತೆಗೆದುಕೊಂಡ ಅಗ್ನಿಯಲ್ಲಿ ವಿಸರ್ಜಿಸಬೇಕೆಂಬ ಇಚ್ಛೆಯನ್ನು ಅವರಿಗೆ ತಿಳಿಸಿದ. ಅವರು ವಾಯುವಿಗೆ ಅನುಮತಿ ಕೊಟ್ಟರು ವಾಯುವು ಅಗ್ನಿಯಲ್ಲಿ ಹಾಕಿದ ಶುಕ್ಲವು ಜ್ವಾಲೆಯಲ್ಲಿ ಬಿತ್ತು. ಆ ಜ್ವಾಲೆಯಿಂದ ಭೃಗು ಹುಟ್ಟಿದ ಕಿಡಿಗಳಿಂದ ಅಂಗಿರಸ ಹುಟ್ಟಿದ ವಾಕ್ ದೇವಿಯಿಂದ ಆ ಇಬ್ಬರು ಹುಟ್ಟಿದರು ಅವಳು ಅವರಿಗೆ ತಾಯಿಯಾದಳು ತನ್ನ ಮಕ್ಕಳನ್ನು ನೋಡಿ ಪ್ರಜಾಪತಿಗೆ ಹೇಳಿದಳು–ಇವರಿಬ್ಬರ ಜೊತೆಗೆ ಮೂರನೇ ಪುತ್ರ ಬೇಕೆಂದಳು

ಪ್ರಜಾಪತಿಯು ಅವಳ ಸ್ನಿಗ್ಧ ಮುಖ ಮಂಡಲವನ್ನು ನೋಡಿದ

"ಪ್ರಜಾಪತಿಯೆ ನನಗೆ ಇಲ್ಲಿಯೇ ಹುಟ್ಟಿದ ಮತ್ತೊಂದು ಮಗು ಬೇಕೆಂದಳು !'

"ಭಾರತೀ ! ನಿನಗೆ ಮೂರನೇ ಪುತ್ರ ಇಲ್ಲಿಯೇ ಹುಟ್ಟುತ್ತಾನೆ " ಸೂರ್ಯ ಹಾಗೂ ಅಗ್ನಿಗೆ ಸಮಾನನಾದ ಪುತ್ರ ಹುಟ್ಟಿದ ಅವನೇ ಅತ್ರಿ ಅತ್ರಿಯು ಋಷಿಯಾದ ಮಂತ್ರದ್ರಷ್ಟಾರನಾದ ಅವನ ಹೆಸರಿನಿಂದ ಗೋತ್ರ ಪ್ರಾರಂಭವಾಯಿತು

ಅಂಗಿರಸನ ಮಗ ಬೃಹಸ್ಪತಿ ಬೃಹಸ್ಪತಿಯ ಮಗ ಭರಧ್ವಾಜ ಭರಧ್ವಾಜನನ್ನು ಉದಧಿನ್ ಎಂದು ಕರೆಯುತ್ತಾರೆ ಅವನು ಮರುತ್ತುಗಳ ಗುರು. ಅವನು ಅಂಗಿರಸನ ಮೊಮ್ಮಗ

ಅಂಗಗಳ ರಸವೇ ಅಂಗಿರಸನಾದ ಭ್ರಮಶೀಲ, ಉದ್ದೀಪಕನೇ ಅತ್ರಿಯಾದ, ಅನ್ನದಾನಿ ಭರದ್ವಾಜನಾದ ಅಂಗ, ಭ್ರಮಣ, ಹಾಗೂ ಅನ್ನದಿಂದ ಜಗತ್ತು ಪ್ರಸನ್ನವಾಯಿತು

ಋಗ್ವೇದದ ಆರನೇ ಮಂಡಲದ ಹಾಗೂ ಅದರ ವಂಶಜರು ಅದರ ರಚನಾಕಾರರಾದರು. ಮಂತ್ರದ್ರಷ್ಟಾರರಾದರು ವೈಶ್ವಾನರ ಅಗ್ನಿ, ಇಂದ್ರ ಹಸುಗಳು, ಪ್ರಗಾಥ, ಪೂಷಾ, ಇಂದ್ರಾಗ್ನಿ ಮತ್ತು ಸರಸ್ವತಿಗಳು ಆ ಮಂಡಲದ ದೇವತೆಗಳಾದರು

**ಆಧಾರ ಗ್ರಂಥ**

**ಋಗ್ವೇದ .** ೫–೭೩–೧೦೩, ೧–೪೯

**ಐತರೇಯ ಬ್ರಾಹ್ಮಣ ,** ೩-೩೪-೧

**ಬೃಹದ್ದೇವತಾ** ೫-೯೭-೧೦

**ಟಿಪ್ಪಣಿ** ಇದು ಒಂದು ರೂಪಕದಂತಿದ ಭೃಗು, ಅಂಗಿರಸ, ಅತ್ರಿಗೋತ್ರ ಹಾಗೂ ವಂಶಜರು ಮೂವರೂ ಒಬ್ಬಳೇ ತಾಯಿಯಿಂದ ಜನ್ಮತಳೆದರೆಂದು ತಿಳಿಯುತ್ತದ

**ಅಂಗಿರಸ** ಐತಿಹಾಸಿಕ ವ್ಯಕ್ತಿ ಎಂದು ಹೇಳಲಾಗುವುದಿಲ್ಲ ಇವನನ್ನು ಅಂಗಿರಸ ಜಾತಿಯ ಪ್ರವರ್ತಕನೆಂದು ಹೇಳಿದೆ

**ಅತ್ರಿ ,** ಐತಿಹಾಸಿಕ ವ್ಯಕ್ತಿಯೆಂದು ಹೇಳಲು ಸಂದೇಹವಿದೆ ಅತ್ರಿ ಹಾಗೂ ಅವನ ವಂಶಜರು ಋಗ್ವೇದದ ಐದನೇ ಮಂಡಲದ ಋಷಿ ಎಂದು ಹೇಳಿದೆ ಪಾಂಚಜನ್ಯನೆಂದೂ ಹೇಳಿದೆ ಇವನ ಹೆಸರಿನಿಂದ ಅತ್ರಿಗೋತ್ರ ಪ್ರಾರಂಭ ವಾಯಿತು

**ಭಾರತೀ** ದೇವವಾಕ್ ಅಥವಾ ಸರಸ್ವತೀ ಎಂದು ಪ್ರಯೋಗಿಸಲಾಗಿದೆ ಭರತನ ಜಾತಿಯ ದೇವತೆ ಯಾದ್ದರಿಂದ ಭಾರತೀ ಎಂಬ ಉಲ್ಲೇಖವನ್ನು ವೇದ ದಲ್ಲಿ ಕಾಣಬಹುದು

**ಭರದ್ವಾಜ ,** ಋಗ್ವೇದದ ಆರನೇ ಮಂಡಲದ ರಚನಕಾರ ಬೃಹಸ್ಪತಿಯ ಮಗ ಅಂಗಿರಸನ ಮೊಮ್ಮಗನೆಂದಿದ್ದಾರೆ ಪುರುಪಂಥ ರಾಜನು ಇವನಿಗೆ ಆಶ್ರಯ ದಾತನಾಗಿದ್ದ ವೈದಿಕ ಸೂಕ್ತ ಪ್ರಷ್ಟಾರ

**ಭೃಗು** ವರುಣನ ಮಗ, ಇವನ ತಾತನ ಹೆಸರು ವಾರುಣೀ ಇವನು ಅಗ್ನಿಪೂಜಕ ಇವನ ವಂಶ ಐತಿಹಾಸಿಕವಾದುದು ವೈದಿಕ ಕಾಲದ ಒಂದು ಪುರೋಹಿತರ ಗುಂಪು ಒಂದು ಪ್ರಾಚೀನ ಜಾತಿ ಇವನನ್ನು ಸೂರ್ಯನಿಗೆ ಹೋಲಿಸುತ್ತಾರೆ ಇವನು ಅರಣಿಯಿಂದ ಅಗ್ನಿಯನ್ನು ಉತ್ಪಾದಿಸಿದ್ದ ಭೃಗ ಎಂದರೆ ಪ್ರಕಾಶ

**ವಾಚ** ವಾಚ ಎಂದರೆ ವಾಣಿ ಎಂದರ್ಥ ಮಾನವ, ಪಶು, ಪಕ್ಷಿ, ಮತ್ತು ಸರೀಸೃಪಗಳ ವಾಣಿಯಲ್ಲಿ ಭೇದವಿದೆ, ವಾಣಿಯ ಉಚ್ಚಾರಣೆಯಲ್ಲಿ ವ್ಯತ್ಯಾಸವಿದೆ ತೂಣವ, ವೀಣಾ, ದುಂದುಭಿಯ ಉಲ್ಲೇಖವನ್ನು ಕಾಣುತ್ತೇವೆ ಕುರುಪಾಂಚಾ ಲರವಾಣಿಯು ಪ್ರಸಿದ್ಧಿಯಾಗಿತ್ತು ಅರ್ಧವಾಣಿ ಮತ್ತು ಬ್ರಾಹ್ಮಣವಾಣಿಯ ಉಲ್ಲೇಖಗಳು ಸಿಗುತ್ತವೆ

**ವಾಯು ,** ವೈದಿಕ ಅಂತರಿಕ್ಷದೇವತೆ ವಿಶ್ವರೂಪನ ಶ್ವಾಸದಿಂದ ವಾಯು ವಿನ ಜನ್ಮವಾಗಿತ್ತು ಅವನು ಆಕಾಶ ಗರ್ಭದಲ್ಲಿ ಮರುತ್ತುಗಳನ್ನು ಹುಟ್ಟಿಸಿದ್ದ. ಇವನ ರಥವನ್ನು ಒಂದು ಸಹಸ್ರ ಕುದುರೆಗಳು ಎಳೆಯುತ್ತವೆ

**ವಿಶ್ವದೇವ ,** ಯಜ್ಞದೇವತೆಗಳ ಒಂದು ಸಮೂಹ.

# ಅಭ್ಯಾವರ್ತಿನ್

ವರಶಿಖ ಒಬ್ಬ ಮಹಾವೀರ ಅವನು ತುರ್ವಶ ಮತ್ತು ವೃಚೀವಂತರಿಗೆ ಒಡೆಯನಾಗಿದ್ದ. ಯುದ್ಧದಲ್ಲಿ ಅಭ್ಯಾವರ್ತಿನ್ ಚಾಪಮಾನ ಮತ್ತು ಸಂಜಯನ ಮಗ ಪ್ರಸ್ತೋಕನನ್ನು ಸೋಲಿಸಿದ್ದ. ಚಾಪಮಾನ ಮತ್ತು ಪ್ರಸ್ತೋಕರಿಗೆ ನಾಚಿಕೆಯಾಗಿತ್ತು ಬೃಹಸ್ಪತಿಯ ಪುತ್ರ ಅಂಗಿರಸನ ಮೊಮ್ಮಗ ಭರದ್ವಾಜನ ಆಶ್ರಮಕ್ಕೆ ವಿಶಾದ ಮನಸ್ಸಿನಿಂದ ಹೊರಟರು ಕಳೆದು ಹೋಗಿರುವ ಗೌರವವನ್ನು ಭಾರದ್ವಾಜರಿಂದ ಪುನಃ ಪಡೆಯಬಹುದೆಂದು ತಿಳಿದಿದ್ದರು.

ಚಾಪಮಾನ ಮತ್ತು ಪ್ರಸ್ತೋಕರು ಭರಧ್ವಾಜನ ಆಶ್ರಮಕ್ಕೆ ಬಂದರು. ಮಹರ್ಷಿ ಭರದ್ವಾಜರು ಇವರನ್ನು ನೋಡಿ ಪಾದ್ಯ, ಅರ್ಘ್ಯ ಹಾಗೂ ಮಧುಪರ್ಕದಿಂದ ಸ್ವಾಗತಿಸಿದರು ಅವರು ಮಾರ್ಗಾಯಾಸದಿಂದ ಚೇತರಿಸಿಕೊಂಡರು ಅವರು ವಿನಯದಿಂದ ಭರಧ್ವಾಜರನ್ನು ಸ್ತುತಿಸಿದರು

"ಮಹಾತ್ಮರೇ ! ತಮ್ಮ ಪರಿಚಯವನ್ನು ಮಾಡಿಕೊಳ್ಳಬಹುದೆ ?" ಎಂದು ಭರದ್ವಾಜರು ಕೇಳಿದರು

"ಋಷಿಗಳೆ ! ನಾನು ಅಭ್ಯಾವರ್ತಿನ್ ಚಾಪಮಾನ ಇವರು ಸಾಂಜೀಯ ಪ್ರಸ್ತೋಕರು ನನ್ನ ಜೊತೆಗಾರರು "

"ಮಹಾತ್ಮರೇ ! ನಿಮಗೆ ಸ್ವಾಗತ ತಾವು ಬಂದ ಕಾರಣವನ್ನು ತಿಳಿಯಬಹುದೆ ?" ಅವರ ಮುಖವನ್ನು ನೋಡುತ್ತಾ ಕೇಳಿದ

"ಋಷಿಗಳೆ ! ಪ್ರಯೋಜನವಿಲ್ಲದೆ ಋಷಿಗಳ ದರ್ಶನ ಪುಣ್ಯವೆಂದು ತಿಳಿಯುತ್ತಾರೆ ಆದರೆ ನಾವು ಅಪೇಕ್ಷಿಗಳು "

"ತಮ್ಮ ಅಪೇಕ್ಷೆಯನ್ನು ಹೇಗೆ ಪೂರ್ತಿ ಮಾಡಲಿ ?"

"ಬ್ರಾಹ್ಮಣರೆ ! ನಾವು ವರಶಿಖನಿಂದ ಪರಾಜಿತರಾಗಿದ್ದೇವೆ "

"ಆಶ್ಚರ್ಯ" ಭರದ್ವಾಜ ಹೇಳಿದ

"ತಮ್ಮ ಕೃಪೆಯಿಂದ ಮರಳಿ ವಿಜಯಿಗಳಾಗಬಲ್ಲೆವು"

"ನಿಮಗೆ ಮಂಗಳವಾಗಲಿ "

"ಋಷಿಗಳೆ ! ತಾವು ನಮ್ಮ ಪುರೋಹಿತರಾಗಬೇಕೆಂದು ಬಯಸುತ್ತೇವೆ ?"

"ಏನು ಲಾಭ !"

"ತಾವು ಪುರೋಹಿತರಾದರೆ ನಮ್ಮ ಕಳೆದುಹೋದ ಶಕ್ತಿ ಬರುತ್ತದೆ ಶತ್ರುವು ಸೋಲುತ್ತಾನೆ."

"ಹೌದು"

"ಬ್ರಾಹ್ಮಣರೆ ! ಅವನು ಕ್ಷತ್ರಿಯ. ಅವನಿಗೆ ಬ್ರಹ್ಮನ ರಕ್ಷಣೆ ಇದೆ."

ಋಷಿ ವಿಚಾರ ಮಗ್ನನಾದ

"ಋಷಿಗಳೆ ! ಅನುಗ್ರಹಿಸಿರಿ "

"ಅವಶ್ಯವಾಗಿ——' "ಭರದ್ವಾಜರು ನಗುತ್ತಾ ಹೇಳಿದರು ಚಾಪಮಾನ ಮತ್ತು ಪ್ರಸ್ತೋಕರು ಹರ್ಷಿತರಾದರು ಅಂಜಲಿ ಬದ್ಧರಾಗಿ ವಿನಯದಿಂದ ವಂದಿಸಿದರು.

"ಪಾಯು ! ಅಭ್ಯಾಗತರ ಪ್ರಾರ್ಥನೆಯನ್ನು ಮನ್ನಿಸಿದ್ದೇನೆ." ಎಂದು ತನ್ನ ಮಗನಿಗೆ ಹೇಳಿದರು.

"ಆಗಲಿ ತಂದೆ" ಎಂದ ನಗುತ್ತಾ

"ಮಗನೆ ಈ ರಾಜರುಗಳನ್ನು ಶಕ್ತಿಶಾಲಿಗಳನ್ನಾಗಿ ಮಾಡು."

"ತಂದೆ " ಆಜ್ಞೆಯನ್ನು ಶಿರಸಾವಹಿಸಿಕೊಂಡ"

"ಅವರು ಶತ್ರುಗಳನ್ನು ಸೋಲಿಸುವಂತಾಗಲಿ "

"ಭಗವನ್" ಎಂದು ತಂದೆಯ ಪಾದಗಳಿಗೆ ವಂದಿಸಿದ

"ಚಾಪಮಾನ ಮತ್ತು ಪ್ರಸ್ತೋಕನು ಕಾರ್ಯಸಿದ್ಧಿಗಾಗಿ ಸಂತೋಷ ಗೊಂಡರು

"ರಾಜರೆ ! ನಾನು ಆಯುಧಗಳಿಗೆ ಬೇರೆ ಬೇರೆ ಅಭಿಷೇಕ ಮಾಡುತ್ತೇನೆ ಅವುಗಳಿಂದ ನೀವು ವಿಜಯಿಗಳಾಗುತ್ತೀರಿ," ಎಂದು ಪಾಯು ಹೇಳಿದ

ರಾಜರಿಬ್ಬರೂ ಶ್ರದ್ಧಾಭಕ್ತಿಯಿಂದ ಆಸನಗಳಲ್ಲಿ ಕುಳಿತರು

ಪಾಯುವು ಮೊದಲು ಕವಚಧಾರಿ ಯೋಧನನ್ನು ಸ್ತುತಿಸಿದ

"ಯುದ್ಧ ಕಾಲದಲ್ಲಿ ಲೋಹ ಕವಚವನ್ನು ರಾಜರು ಧರಿಸುತ್ತಾರೆ ಮೇಘದಂತೆ ಕಾಣುತ್ತಾರೆ ರಾಜರೆ ಅಹಿಂಸಾ ಪಾಲಕರಾಗಿ ವಿಜಯವನ್ನು ಸಾಧಿಸಿರಿ. ಮಹಿಮೆಯುಳ್ಳ ಈ ಕಿರೀಟವು ನಿಮ್ಮನ್ನು ಕಾಪಾಡಲಿ "

ಪಾಯುವು ಧನುಷ್ಷನ್ನು ಸ್ತುತಿಸಿದ

"ಧನುಷ್ಷಿನಿಂದ ಯುದ್ಧದಲ್ಲಿ ವಿಜಯವನ್ನು ಪಡೆಯುತ್ತಾರೆ ಶತ್ರುಗಳ ಆಕಾಂಕ್ಷೆ ನಾಶವಾಗುತ್ತದೆ ಈ ಧನುಷ್ಷಿನಿಂದ ಇರುವ ಶತ್ರುಗಳು ನಾಶವಾಗುತ್ತಾರೆ "

ಪಾಯುವು ಸಿಂಜಿನಿಯನ್ನು ಸ್ತುತಿಸಿದ

"ಧನುಷ್ಷಿನ ಸಿಂಜನಿಯು ಸಂಗ್ರಾಮದಿಂದ ಹೊರಹೋಗಲು ಕಿವಿಯ ಬಳಿ ಪ್ರಿಯವಾದ ಮಾತುಗಳನ್ನು ಹೇಳುತ್ತದೆ ಸಿಂಜಿನಿಯು ಬಾಣದಿಂದ ಮುಕ್ತವಾಗಿ ಶಬ್ದ ಮಾಡುತ್ತದೆ "

ಧನುಷ್ಷಿನ ತುದಿಗಳಿಗೆ ಅಭಿಷೇಕ ಮಾಡುತ್ತಾ

"ತಾಯಿಯು ತನ್ನ ಪುತ್ರನನ್ನು ರಕ್ಷಿಸುವಂತೆ ಈ ಬಿಲ್ಲಿನ ಕೊನೆಗಳು ಯುದ್ಧದಲ್ಲಿ ರಾಜನ ರಕ್ಷಣೆಯನ್ನು ಮಾಡಲಿ !" ಎಂದು ಪಾಯು ಹೇಳಿದ

ಪಾಯುವು ಬತ್ತಳಿಕೆಗೆ ಅಭಿಷೇಕ ಮಾಡಿದ

"ಬಾಣಗಳ ತಂದೆಗೆ ಸಮಾನವಾದುದು ಬತ್ತಳಿಕೆ, ಬಾಣಗಳು ಇದರ ಮಕ್ಕಳು. ಬಾಣಗಳು ಬತ್ತಳಿಕೆಯಿಂದ ಹೊರಬರುತ್ತಲೆ ಶಬ್ದ ಮಾಡುತ್ತವೆ ಆ ಸಮಯದಲ್ಲಿ ಸಮಸ್ತ ಶತ್ರುಗಳನ್ನು ನಾಶಪಡಿಸಿ ಜಯವನ್ನು ತಂದುಕೊಡುತ್ತವೆ" ಸಾರಥಿ ಮತ್ತು ಲಗಾಮುಗಳಿಗೆ ಪಾಯು ಅಭಿಷೇಕ ಮಾಡಿದ

"ಕುದುರೆಗಳನ್ನು ಕಟ್ಟಿದ ರಥವನ್ನು ಸಾರಥಿಯು ತನ್ನ ಮನಸ್ಸಿನಾನುಕೂಲದಂತೆ ನಡೆಸುತ್ತಾನೆ ಅಶ್ವದ ಸೇರದವರೆವಿಗೆ ಹಗ್ಗಗಳಿರುತ್ತವೆ ಅಶ್ವಗಳನ್ನು ಹಿಂದಕ್ಕೆ ಮುಂದಕ್ಕೆ ನಡೆಸುತ್ತಾನೆ ಆ ಲಗಾಮುಗಳ ಯಶಕ್ಕಾಗಿ ಪ್ರಾರ್ಥಿಸಿ" ಅಶ್ವಗಳಿಗೆ ಅಭಿಷೇಕ ಮಾಡಿದ.

"ರಥದ ಜೊತೆಯಲ್ಲಿ ವೇಗವಾಗಿ ಹೋಗುವ ಅಶ್ವಗಳು ಧೂಳನ್ನು ಎಬ್ಬಿಸುತ್ತಾ ಶಬ್ದ ಮಾಡುತ್ತವೆ ಹಿಂದೆ ಬಾರದೆ ಶತ್ರುಗಳನ್ನು ಸುತ್ತುವರಿಯುತ್ತವೆ "ಆಯುಧಾಗಾರಕ್ಕೆ ಅಭಿಷೇಕ ಮಾಡಿದ

"ರಥದ ಜೊತೆಯಲ್ಲಿ ವೇಗವಾಗಿ ಹೋಗುವ ಅಶ್ವಗಳು ಧೂಳನ್ನು ಎಬ್ಬಿಸುತ್ತಾ ಶಬ್ದ ಮಾಡುತ್ತವೆ ಹಿಂದೆ ಬಾರದೆ ಶತ್ರುಗಳನ್ನು ಸುತ್ತುವರಿಯುತ್ತವೆ" ಆಯುಧಾಗಾರಕ್ಕೆ ಅಭಿಷೇಕ ಮಾಡಿದ ಪಾಯು

"ಹವಿಸ್ಸು ಅಗ್ನಿಯನ್ನು ಪ್ರವೇಶಿಸುತ್ತದೆ ರಥದಲ್ಲಿ ತಂದ [illegible] ರಾಜರಿಗೆ ವೃದ್ಧಿಯನ್ನುಂಟು ಮಾಡುತ್ತದೆ ಶಸ್ತ್ರಾಸ್ತ್ರಗಳಿರುವ ರಥದ ಹತ್ತಿರ ನಾವು ಸಂತೋಷದಿಂದ ಹೋಗುತ್ತೇವೆ"

ಪಾಯುವು ರಥರಕ್ಷಕರಿಗೆ ಅಭಿಷೇಕ ಮಾಡುತ್ತಾ

"ಶತ್ರುಗಳ ಅನ್ನ ಮತ್ತು ಧನವನ್ನು ನಷ್ಟಮಾಡುತ್ತಾರೆ ತನ್ನ ಮಿತ್ರರಿಗೆ ಅನ್ನವನ್ನು ಕೊಡುತ್ತಾರೆ ಸಂಕಟಸಮಯದಲ್ಲಿ ಈ ರಥರಕ್ಷಕರನ್ನು ಆಶ್ರಯಿಸುತ್ತಾರೆ ಇವರು ಶತ್ರುಗಳನ್ನು ಜಯಿಸಿ ವಿಜಯಿಗಳಾಗುತ್ತಾರ"

ಪಾಯುವು ಗಣದೇವತೆಯನ್ನು ಸ್ತುತಿಸಿದ

"ಬ್ರಾಹ್ಮಣರೆ! ಪಿತೃಗಳೆ! ತಾವು ರಕ್ಷಕರಾಗಿ ದ್ಯಾವಾಪೃಥ್ವಿಗಳು ಮಂಗಳವನ್ನುಂಟು ಮಾಡಲಿ ಪೂಷಾ ಪಾಪದಿಂದ ಮುಕ್ತರಾಗಲಿ ಶತ್ರುಗಳು ನಮ್ಮ ಶಾಸಕರಾಗದಿರಲಿ" ಕವಚದ ಸ್ತುತಿಯನ್ನು ಮಾಡಿದ

"ಬಾಣದ ದಾರಿ ಮೃಗಗಳ ಕೊಂಬು ಈ ಸಿಂಜಿನಿಯು ಮೃಗಗಳ ಕೋಣಿನಿಂದ ಕಟ್ಟಲ್ಪಟ್ಟಿದೆ ಇದು ಪ್ರೇರೇಪಿಸಿ ಬೀಳುತ್ತದ [illegible] ಲ್ಲಿ ಜನ [illegible] ರ [illegible] ಅಲ್ಲಿ ನಮಗೆ ಆಶ್ರಯವನ್ನು ಕೊಡು ಬಾಣಗಳೇ ನಮ್ಮನ್ನು [illegible] [illegible] ಂತ ಮಾಡಿ ನಮ್ಮ ಶರೀರವು ಕಲ್ಲಿನಂತ ದೃಢವಾಗಲಿ ಸೋಮನ ನಮ್ಮ ಪಕ್ಷವಹಿಸಲಿ ಅದಿತಿಯು ನಮಗ [illegible] ಗಳನ್ನುಂಟುಮಾಡಲಿ"

ಚಾಟಿಯನ್ನು ಪಾಯು ಸ್ತುತಿಸಿದ

"ಸಾರಥಿಯು ಕುದುರೆಗಳನ್ನು ನಿನ್ನ ಮೂಲಕ ಚಲಾಯಿಸುತ್ತಾನೆ ಕುದುರೆಗಳನ್ನು ರಣಭೂಮಿಗೆ ಕರೆದುಕೊಂಡು ಹೋಗು"

ಹಸ್ತ ತ್ರಾಣವನ್ನು ಸ್ತುತಿಸಿದ

"ಹಸ್ತಾಘ್ನ ಪ್ರತ್ಯಂಚದ ಪ್ರಹಾರವನ್ನು ನಿವಾರಿಸುತ್ತೀಯೆ ಸರ್ಪಸದೃಶವಾದ ದೇಹದ ಮೂಲಕ ಪ್ರವೇಶಿಸುತ್ತೀಯ" ಅಧೋಮುಖಬಾಣ, ದಗ್ಧಬಾಣ, ವರುಣಾಸ್ತ್ರಗಳನ್ನು ಸ್ತುತಿಸಿದ

'ವಿಷಪೂರಿತ ಬಾಣಗಳೆ, ಲೋಹಯುಕ್ತ ಬಾಣಗಳೆ, ಹಿಂಸಕ ಮುಖದ ಬಾಣಗಳೆ ಪರ್ಜನ್ಯದಿಂದ ಹುಟ್ಟಿದ ಬಾಣಗಳೆ ನಿಮಗೆ ನಮಸ್ಕಾರ"

ದನುರ್ಯುಕ್ತಿ ಬಾಣಗಳನ್ನು ಸುತ್ತಿಸಿದ

"ಬಾಣವೆ ! ಕೊಲ್ಲುವುದರಲ್ಲಿ ನೀನು ಪ್ರವೀಣ ಧನುಷ್ಷಿನಿಂದ ಬಿಡಲ್ಪಟ್ಟು ಶತ್ರುಗಳಿಗೆ ತೊಂದರೆ ಕೊಡು ಶತ್ರುಗಳನ್ನು ಜೀವದಿಂದ ಬಿಡಬೇಡ"

ವಾಯುವು ಯುದ್ಧದ ಆದಿಯನ್ನು ಸ್ತುತಿಸಿದ

"ಬ್ರಹ್ಮಣಸ್ಪತಿ ಮತ್ತು ಆದಿತಿಗಳೆ ! ಯುದ್ಧರಂಗದಲ್ಲಿ ಬಾಣಗಳು ಬಿದ್ದ ಜಾಗವನ್ನು ಸುಖಮಯವನ್ನಾಗಿ ಮಾಡಿ! ಯುದ್ಧರಚ್ಚೆಗಳನ್ನು ವಾಯು ಸ್ತುತಿಸಿದ

"ಬಂಧುಗಳು ನಮ್ಮನ್ನು ಶತ್ರುಭಾವದಿಂದ ಕೊಲ್ಲಲು ಪ್ರಯತ್ನಿಸುತ್ತಾರೋ ಅವರನ್ನು ದೇವತೆಗಳು ಹಿಂಸಿಸಲಿ"

"ರಾಜರೆ ! ಈ ಮಂತ್ರವು ನಿಮಗೆ ಕವಚ ಪ್ರಾಯವಾಗಲಿ" ಎಂದು ರಾಜರನ್ನು ಆಶೀರ್ವದಿಸುತ್ತಾ ವಾಯುವು ಹೇಳಿದ ರಾಜರು ಅನುಗೃಹೀತರಾಗಿ ವಾಯುವಿಗೆ ವಂದಿಸಿದರು

"ರಾಜರೆ ! ತಾವು ಆಯುಧಗಳಿಂದ ಸಜ್ಜಾಗಿ ಮಹಾಸುಖಿಸೊಡನೆ ಯುದ್ಧ ಮಾಡಲು ಹೋಗಿ ನಿಮಗೆ ಮಂಗಳವಾಗುತ್ತದೆ"

ಚಾಪಮಾನ ಹಾಗೂ ಪ್ರಸ್ತೋಕ ರಾಜರು ಹೊಸ ಪ್ರೇರಣೆ, ಹೊಸ ಉತ್ಸಾಹದಿಂದ ವರಶಿಖನನ್ನು ಸೋಲಿಸಲು ವೇಗವಾಗಿ ಹೋದರು

ಘೋರವಾಗಿ ಯುದ್ಧವಾಗುತ್ತಿತ್ತು ಸೈನಿಕರು ಯುದ್ಧರತರಾಗಿದ್ದರು ಋಷಿ ಭರದ್ವಾಜರು ಚಾಪಮಾನ ಮತ್ತು ಪ್ರಸ್ತೋಕರ ವಿಜಯಕ್ಕಾಗಿ ಇಂದ್ರನನ್ನು ಸ್ತುತಿಸಿದರು

"ಇಂದ್ರನೆ ! ನೀನು ವೃಷಭರಾಜನಿಗೆ ಯುದ್ಧರಥವನ್ನು ಕೊಟ್ಟಿದ್ದೆ ಹತ್ತು ದಿನಗಳವರೆವಿಗೆ ಯುದ್ಧ ಮಾಡುತ್ತಲೇ ಇದ್ದರು ಆಗ ನೀನು ಅವನನ್ನು ರಕ್ಷಿಸಿದೆ ವೇತಸ್ಸನಿಗೆ ಸಹಾಯ ಮಾಡಿದೆ ನೀನು ತುಗ್ರಾಸುರನನ್ನು ಕೊಂದೆ ನೀನು ಸ್ತುತಿಶೀಲ ಕುಜರಾಜನಿಗೆ ಸಂಪತ್ತನ್ನು ಅನುಗ್ರಹಿಸಿದೆ ಇಂದ್ರನೆ ! ನೀನು ಶತ್ರು ಸಂಹಾರಕನು ನೀನು ಸಹಸ್ರಾರು ಶಂಬರ ಸೇನೆಯನ್ನು ನಾಶಪಡಿಸಿದೆ ಶಂಬರನು ಋಜ್ಞಗಳಿಗೆ ವಿಘ್ನವನ್ನುಂಟು ಮಾಡುತ್ತಿದ್ದ ಅವನನ್ನು ಸೋಲಿಸಿದೆ ದಿವೋದಾಸ

ನನ್ನು ರಕ್ಷಿಸಿದೆ ಸೋಮಪಾನದಿಂದ ಪ್ರಸನ್ನನಾಗಿ ದಿಭೀತಿ ರಾಜನ ಶತ್ರುವಾದ ಚುಮುರಿಯನ್ನು ನಾಶಮಾಡಿದೆ ಪೀರನಸನಿಗೆ ರಜಿ ಎಂಬ ಕನ್ಯೆಯನ್ನು ಕೊಟ್ಟೆ. ನಿನ್ನ ಅಸಾಧಾರಣ ಪರಾಕ್ರಮದಿಂದ ಅರವತ್ತು ಸಾವಿರ ಸೈನಿಕರನ್ನು ಒಂದೇ ಸಾರಿ ಸಂಹರಿಸಿದೆ "

"ವೀರರ ಸ್ನೇಹಿತನಾದ ಇಂದ್ರನೆ! ಮೂರು ಲೋಕಕ್ಕೂ ನೀನು ರಕ್ಷಕ ಶತ್ರುಗಳನ್ನು ಗೆದ್ದವ ಸ್ತುತಿ ಮಾಡುವವರು ನಿನ್ನಿಂದ ಶಕ್ತಿ ಮತ್ತು ಸುಖಗಳನ್ನು ಅಪೇಕ್ಷಿಸುತ್ತಾರೆ ಭರದ್ವಾಜನಾದ ನಾನು ನಿನ್ನಿಂದ ಕೊಡಲ್ಪಟ್ಟ ಬಲ ಮತ್ತು ಸುಖವನ್ನು ಸ್ತುತಿಕರೊಂದಿಗೆ ಹೊಂದುವಂತೆ ಗಲಿ ಇಂದ್ರ! ಸ್ನೇಹಿತನ ಹಾಗೆ ಸ್ತುತಿಸುತ್ತೇನೆ. ಇವರಿಂದ ನಾವು ನಿನಗೆ ಪ್ರೀತಿ ಪಾತ್ರರಾಗಲಿ, ಪ್ರತರ್ದನ ಪುತ್ರ ನಕ್ರನು ಶತ್ರುಗಳನ್ನು ನಾಶಮಾಡಿ ಧನವನ್ನು ಪಡೆಯಲಿ "

ಭರದ್ವಾಜನ ಸ್ತುತಿಯಿಂದ ಇಂದ್ರ ಪ್ರಸನ್ನನಾದ ಚಾಪಮಾನ ಹಾಗೂ ಪ್ರಸ್ತೋಕರಿಗೆ ಸಹಾಯ ಮಾಡಲು ಭರದ್ವಾಜ ಪ್ರಾರ್ಥಿಸಿದ ಪ್ರಾರ್ಥನೆ ಕೈಗೂಡಿತು. ಆ ರಾಜರಿಬ್ಬರಿಗೂ ಸಹಾಯ ಮಾಡಲು ಹರ್ಯುಪೀಯಾ ನದಿಯ ದಡಕ್ಕೆ ಇಂದ್ರ ಬಂದ.

ಇಂದ್ರನು ವಜ್ರಧಾರಿಯಾಗಿದ್ದ ಅವನು ಅದ್ಭುತ ಪರಾಕ್ರಮವನ್ನು ತೋರಿಸಿದ. ವಜ್ರಾಘಾತದಿಂದ ವರಶಿಖನ ಪುತ್ರರು ಚೂರು ಚೂರಾದರು ಚಾಪಮಾನನಿಗೆ ಕೇಳಿದ ಧನವನ್ನು ಅನುಗ್ರಹಿಸಿದ ಹರಿದೂಪಿಯ ನಗರದ ಮಧ್ಯೆ ಇದ್ದ ವರಶಿಖನ ವಂಶಜನಾದ ವೃತ್ತಿವಾನನ ಮಕ್ಕಳನ್ನೂ ಕೊಂದ ಯಜ್ಞಪಾತ್ರೆಯ ಭಂಜಕ, ಕವಚಧಾರಿಗಳಾದ ಒಂದು ನೂರು ವರಶಿಖನ ಆಕ್ರಮಣಕಾರಿ ಮಕ್ಕಳನ್ನು ಒಂದೇ ಸಾರಿಗೆ ಕೊಂದ ಇಂದ್ರನು ತುರ್ವಶ ರಾಜನಿಗೆ, ಸೃಂಜಯರಾಜನಿಗೆ ಅರ್ಪಿಸಿದ್ದ ದೈವವಾತವಂಶಿ ಅಭ್ಯಾವರ್ತಿಯ ಸಮೀಪ ವರಶಿಖನ ಮಕ್ಕಳನ್ನು ಅಧೀನಪಡಿಸಿದ್ದ ಈ ರೀತಿ ಚಾಪಮಾನ ಹಾಗೂ ಪ್ರಸ್ತೋಕರು ಇಂದ್ರನ ಸಹಾಯದಿಂದ ವರಶಿಖನನ್ನು ಸೋಲಿಸಿ ಅವರ ಹಿಂದಿನ ಗೌರವವನ್ನು ಸಂಪಾದಿಸಿಕೊಂಡರು

ಅಭ್ಯಾವರ್ತನ ಹಾಗೂ ಸಾಂಜೀಯರಾಜರು ವಿಜಯಿಗಳಾದ ಮೇಲೆ ಭರದ್ವಾಜನ ಸೇವೆಗೆ ಬಂದರು ಭರದ್ವಾಜನಿಗೆ ದಾನ ನೀಡಿದರು ಆ ದಾನವನ್ನು ನೋಡಿ ಭರದ್ವಾಜನು ಅಗ್ನಿಯನ್ನು ಸ್ತುತಿಸಿದ.

"ಅಗ್ನಿಯೆ! ದಾನಿಯಾದ ಅಭ್ಯಾವರ್ತಿಯಾದ ಚಾಪಮಾನನು ದಾಸಿಯರು ಸಹಿತವಾಗಿ ರಥ ಹಾಗೂ ಇಪ್ಪತ್ತು ಹಸುಗಳನ್ನು ದಾನವಾಗಿ ಕೊಟ್ಟಿದ್ದಾನೆ. ಪೃಥು ವಂಶಿರಾಜ ಅಭ್ಯಾವರ್ತಿಯ ದಕ್ಷಿಣೆಯನ್ನು ಯಾರೂ ನಾಶಮಾಡಲಾರರು ಇಂದ್ರನನ್ನು ಸ್ತುತಿಸಿದ ಮಂತ್ರದ್ರಷ್ಟಾ ಹಾಗೂ ಋಷಿ ಪಾಯುವಿಗೆ ಪ್ರಸ್ತೋಕನು ಪತ್ತು ಸ್ವರ್ಣಕೋಶಗಳನ್ನು ಹಾಗೂ ಹತ್ತು ಕುದುರೆಗಳನ್ನು ಕೊಟ್ಟ ಎಲ್ಲರ ಹಿತಕ್ಕಾಗಿ ದಾನವನ್ನು ಸ್ವೀಕರಿಸಿದ ಸೃಂಜಯನ ಪುತ್ರನು ಅವನನ್ನು ಪೂಜಿಸಿದ.

## ಆಧಾರ ಗ್ರಂಥ

ಋಗ್ವೇದ ; ೬-೨೭-೪-೫೫, ೬-೨೭-೫-೮, ೬-೨೭-೮, ೬-೪೮
೨೨-೨೫, ೬-೮೫
ಬೃಹದ್ದೇವತಾ : ೫-೧೨೪-೧೪-೩

ಟಿಪ್ಪಣಿ . ಈ ಕಥೆಯಲ್ಲಿ ಪ್ರಾಚೀನ ಕಾಲದ ಯುದ್ಧದ ಉಪಕರಣಗಳ ವರ್ಣನೆ ಯನ್ನು ಕಾಣಬಹುದು ಋಷಿಜ್ಞಾನ ಮತ್ತು ಯದ್ಧಗಳ ಅನುಸಂದಾನುಗಳ ಲಾಭ ವನ್ನು ಪಡೆಯಲಾಗುತ್ತಿತ್ತು. ಹಿಂದಿನ ಋಷಿಗಳು ಇಂದಿನ ವಿಜ್ಞಾನಿಗಳಿಗೆ ಸಮನಾಗಿದ್ದರು ಯಾವಾಗಲೂ ಜ್ಞಾನಾರ್ಜನೆಯಲ್ಲಿಯೇ ಆಸಕ್ತರಾಗಿದ್ದ ಅವರು ತಮ್ಮ ಅಧ್ಯಯನಗಳನ್ನು ಆಧುನಿಕ ಪ್ರಯೋಗಗಳಂತೆ ಮಾಡುತ್ತಿದ್ದರು ಅಂದಿನ ಯುದ್ಧೋಪ ಕರಣಗಳೆಂದರೆ ಲೋಹಧಾರಿ ಸೈನಿಕ, ಧನುಷ್ಯ, ಸಿಂಜನಿ, ಧನಿಸ್ಸಿನ ಮೂಲ, ಗಜಸಾರಥಿ, ಹಗ್ಗ, ಲಗಾಮು, ಕುದುರೆ, ಆಯುಧಶಾಲೆ, ರಥರಕ್ಷಕ ಯುದ್ಧದೇವತೆ, ಕವಚ, ಚಾಟಿ, ಕೈಕವಚ, ದಗ್ಧಬಾಣ, ಅಧೋಮುಖಿ ಬಾಣ, ವರುಣಾಸ್ತ್ರ, ಧನುರ್ಮುಕ್ತಬಾಣ, ಯುದ್ಧಾರಂಭ ಕಾಲ, ಕವಚ ಕಟ್ಟುವವ ಯುದ್ಧೇಚ್ಛುವಿನ ಸ್ತುತಿಗಳನ್ನು ಮಾಡ ಲಾಗಿದೆ.

**ಕಶಾ ;** ಕುದುರೆಯನ್ನು ಹೊಡೆಯಲು ಉಪಯೋಗಿಸುವ ಸಾಧನ ಚಾಟಿ

**ಅಭ್ಯಾವರ್ತಿನ್ .** ಸೃಂಜಯ, ದೇವಾತ ಇವರು ಒಬ್ಬನೇ ಎಂದು ತಿಳಿಯ ಲಾಗಿದೆ ಸೃಂಜಯರ ಚಕ್ರವರ್ತಿ ಇವರ ಉಲ್ಲೇಖ ಪಾರ್ಥಿವನೆಂದೂ ಇದೆ ಇವನು ಪಾರ್ಥಿವನೆಂಬುವು ಒಂದು ಮತ ಇವನ ಪಶ್ಚಿಮ ದಿಕ್ಕಿನ ಪ್ರಜೆಗಳು ಇರಾನಿನ ಆಕೋಶಿಯಾ ಎಂಬ ಸ್ಥಳದವರಾಗಿದ್ದರು.

**ಚಾಪಮಾನ .** ಅಭ್ಯಾವರ್ತಿಯ ತಾತನ ಹೆಸರು

**ತುರ್ವಶ ,** ಋಗ್ವೇದದಲ್ಲಿ ಯದು ಹಾಗು ತುರ್ವಶ ಜಾತಿಗಳ ಉಲ್ಲೇಖ ಅನೇಕ ಕಡೆ ವರ್ಣನೆ ಜೊತೆಯಲ್ಲಿ ಸಿಕ್ಕುತ್ತದೆ ಪಂಚ ಜನರಲ್ಲಿ ತುರ್ವಶರೂ ಒಂದು ಜಾತಿ. ಸುದಾಸನೆ ಜತೆ ಇವರ ಉಲ್ಲೇಖವನ್ನು ಕಾಣಬಹುದು. ಇಂದ್ರನು ಯುದ್ಧದಲ್ಲಿ ತುರ್ವಶರಿಗೆ ಸಹಾಯ ಮಾಡಿದ್ದ ದಿವೋದಾಸನ ಮೇಲೆ ಆಕ್ರಮಣ ಮಾಡಿದ ವರ್ಣನೆ ಇದೆ ಈ ಜಾತಿ ಕಾಲಾಂತರದಲ್ಲಿ ಪಾಂಚಾಲರೊಡನೆ ವಿಲೀನ ವಾಯಿತೆಂದು ಹೇಳುತ್ತಾರೆ. ಇವರು ಪರುಷ್ಣೀ ನದಿಯ ತಟದಲ್ಲಿದ್ದರೆಂದು ಹೇಳುತ್ತಾರೆ. ಆದರೆ ಇವರ ನಿಜವಾದ ಸ್ಥಾನದ ಬಗ್ಗೆ ಸಂಶೋಧನೆಯಾಗಬೇಕಾಗಿದೆ ಇದು ಜಾತಿವಾಚಕ. ಕಣ್ವನು ಇವರ ಪುರೋಹಿತ.

**ಪಾಯು ;** ಋಗ್ವೇದದಲ್ಲಿ ರಕ್ಷಕನೆಂಬ ಅರ್ಥವಿದೆ. ಇನ್ನೊಂದು ಭರದ್ವಾಜ ಕವಿ ಎಂದಿದೆ ಇವನು ಸೂಕ್ತದ್ರಷ್ಟಾರ. ದಿವೋದಾಸ ರಾಜನ ಆಶ್ರಿತ.

**ಪ್ರಸ್ತೋಕ :** ಋಗ್ವೇದ ಕಾಲದ ಒಬ್ಬ ರಾಜ. ಉದಾರಿ ಸಾಯಣಾದಿ

ಗಳು ಇವನನ್ನು ದಿವೋದಾಸ, ಅತಿಥಿಗ್ವ ಮತ್ತು ಅಶ್ವಥನೆಂದು ನಾಮಾಂತರಗಳನ್ನು ಹೇಳುತ್ತಾರೆ, ಪಾಮುವಿಗೆ ಇವನನ್ನು ದಾನ ನೀಡಿದ್ದ.

**ವರಶಿಖ :** ಒಂದು ಜಾತಿಯ ಮುಖ್ಯಸ್ಥ ಆದಿವಾಸಿಗಳ ನಾಯಕನ ಹೆಸರಾಗಿದೆ. ಚಾಪಮಾನನು ಇವನನ್ನು ಸೋಲಿಸಿದ್ದ ತುರ್ವಶ ಹಾಗೂ ಸಚೀವತ್ತ ಜನರ ನಾಯಕನೆಂದು ಇನ್ನೊಂದು ಮತ

**ಸಾಂಜರ್ಯ** · ಸೃಂಜವರ ರಾಜನಾಗಿದ್ದ. ಭರದ್ವಾಜನಿಗೆ ಆಶ್ರಯದಾತ.

**ವಲ್ಲ-ರಶ್ಮಿ** ಕುದುರೆಗೆ ಕಟ್ಟುವ ಹಗ್ಗ ಲಗಾಮು.

**ಹಪ್ಪಿಪಾ ನಗರ** ಕಲ್ಪನೆಯ ಒಂದು ಜಾತಿ. ಪ್ರಾಚೀನ ಹರಪ್ಪನಗರದ ಹೆಸರು.

   

## ವರುಣ-ವಶಿಷ್ಠ-ಶ್ವಾನ

---

ಒಂದು ಯಾಗ ನಡೆಯುತ್ತಿತ್ತು ಅಲ್ಲಿ ಊರ್ವಶಿ ಇದ್ದಳು ಅಲ್ಲಿಯೇ ಮಿತ್ರ ವರುಣರೂ ಇದ್ದರು. ಇವರ ಜೊತೆಯಲ್ಲಿ ಅನೇಕ ದೇವಗಣಗಳು ಉಪಸ್ಥಿತರಿದ್ದರು ಮಿತ್ರ ವರುಣರ ದೃಷ್ಟಿ ಉರ್ವಶಿಯ ಮೇಲೆ ಬಿತ್ತು. ಅವಳ ರೂಪ ಮಾಧುರ್ಯವನ್ನು ಹೀರತೊಡಗಿದರು ದೃಷ್ಟಿಯಲ್ಲಿ ಮಾದಕತೆ ಕಾಣುತ್ತಿತ್ತು ಅದು ಮನಸ್ಸಿನಲ್ಲಿ ರೂಪುಗೊಂಡಿತು ತೀರ್ವರೂಪದ ಆಕರ್ಷಣೆಯಿಂದ ಮಾನಸಿಕ ಸಮತೋಲನ ನಾಶವಾಯಿತು

ನಾರಿಯ ಆಕರ್ಷಣೆ, ರೂಪದ ಆಕರ್ಷಣೆ, ಯೌವನದ ಆಕರ್ಷಣೆಯಿಂದ ಕಾಮದ ಕಲ್ಪನೆ ಸಾಕಾರ ಮೂರ್ತಿಯಾಯಿತು ಕಾಮ ನಕ್ಕ, ಕಾಮದ ಸಹವಾಸ ಮನಸ್ಸಿನೊಡನೆ ಆಯಿತು ಕಾಮದ ಸಂಬಂಧ ಇಂದ್ರಿಯದೊಡನೆ ಉಂಟಾಯಿತು ಮನಸ್ಸು, ಕಾಮ, ಇಂದ್ರಿಯ ಶಿಥಿಲತೆ ಈ ತ್ರಿದೋಷಗಳಿಂದ ಹುಟ್ಟಿದ ಶರೀರ ಕ್ಷೋಭೆಗೊಂಡಿತು ಶರೀರ ಈ ಕ್ಷೋಭೆಯಿಂದ ಕಲ್ಪನಾ ಸುಖದಲ್ಲಿ ತೂಗಾಡಿತು. ರತಿಸುಖದ ಚಿಂತನೆಯಲ್ಲಿ ವೀರ್ಯ ತನ್ನ ಸ್ಥಾನ ಬಿಡಲು ಸಿದ್ಧವಾಯಿತು ಕಾಮ ನಕ್ಕಿತು. ಮಿತ್ರ ವರುಣರ ವೀರ್ಯ ಅವರ ಶರೀರದಿಂದ ಹೋರಡಲು ಆತುರಗೊಂಡಿತು. ಆವೇಗವನ್ನು ತಡೆಯಲು ಅವರು ಅಸಮರ್ಥರಾದರು

ಊರ್ವಶಿ ಅವರ ಸ್ಥಿತಿಯನ್ನು ನೋಡಿ ನಕ್ಕಳು ಅವರ ಬಗ್ಗೆ ಕರುಣೆ ಬಂದಿತು ಮಿತ್ರ ವರುಣರು ಆಸನ್ನ ಸ್ಖಲನಾವಸ್ಥೆಯಿಂದ ಊರ್ವಶಿಯನ್ನು ನೋಡಿ ಖಿನ್ನರಾದರು. ಆದರೆ ವೀರ್ಯವನ್ನು ತಡೆಯಲು ಸಾಧ್ಯವಾಗಲಿಲ್ಲ. ಇಂದ್ರಿಯಗಳು ನಿಯಂತ್ರಣ ತಪ್ಪಿದವು.

ಹತ್ತಿರದಲ್ಲಿ ನೀರು ತುಂಬಿದ ಕೊಡವಿತ್ತು ಆ ಕಾಮ ಪೀಡಿತರಿಗೆ ಬೇರೆ ಸ್ಥಳವಿರಲಿಲ್ಲ ಅವರು ವೀರ್ಯವನ್ನು ಆ ಕುಂಭದಲ್ಲಿ ಬಿಟ್ಟರು. ಪ್ರಗಲ್ಭಳಾದ ಊರ್ವಶಿಯ ಮೇಲ್ಮುಸುಕು ಮೂಗಿನ ಕೆಳಕ್ಕೆ ಬಂದಿತು ಅವರ ಸ್ಥಿತಿಯನ್ನು ನೋಡಿ ವ್ಯಂಗವಾಗಿ ನಕ್ಕಳು ಮಿತ್ರ ವರುಣರು ನಿಂತರು ತಮ್ಮ ಸ್ಥಿತಿಯ ಬಗ್ಗೆ ವೈರಾಗ್ಯ ಬಂದಿತು ಅಳುವೂ ಬಂದಿತು ಅವರು ಅಲ್ಲಿಂದ ಪಲಾಯನ ಗೈದರು ರಾತ್ರಿಯುವರೆವಿಗೆ ವೀರ್ಯ ಆ ಕುಂಭದಲ್ಲಿಯೇ ಇತ್ತು

ಆ ಶುಕ್ರ ಕುಂಭ ಜಲ, ಸ್ಥಲ ಪವಿತ್ರವಾದವು ಆದ್ದರಿಂದ ಸ್ಥಲದಿಂದ ಋಷಿ ಶ್ರೇಷ್ಠ ಮುನಿಪುಂಗವ ವಶಿಷ್ಠ, ಕುಂಭದಿಂದ ಅಗಸ್ತ್ಯ, ಜಲದಿಂದ ಪ್ರಕಾಶ ಮಾನವಾದ ಮತ್ಸ್ಯಗಳು ಹುಟ್ಟಿದವು

ನೀರನ್ನು ತೆಗೆದುಕೊಂಡು ಹೋಗುವಾಗ ಮಹರ್ಷಿ ವಶಿಷ್ಠರು ಒಂದು ಹೂವಿನ ಮೇಲೆ ಇದ್ದರು ವಿಶ್ವದೇವತೆಗಳು ಆ ಪುಷ್ಪವನ್ನು ನಾಲ್ಕು ಕಡೆಯೂ ಧರಿಸಿದರು ಮಹರ್ಷಿ ನೀರಿನಿಂದ ಹೊರಬಂದು ಮಹಾತಪಸ್ಸಿಗೆ ಕುಳಿತನು ಮಹಾ ತಪಸ್ಸಿನಿಂದ ಇಂದ್ರನನ್ನು ಪ್ರತ್ಯಕ್ಷ ಮಾಡಿಕೊಂಡ ಬೇರೆ ಋಷಿಗಳಿಗೆ ಇಂದ್ರ ಅದೃಶ್ಯನಾಗಿಯೇ ಇದ್ದ ಆದರೆ ವಶಿಷ್ಠನಿಗೆ ಪ್ರತ್ಯಕ್ಷನಾಗಿದ್ದ ಅನಂತರ ಇಂದ್ರನನ್ನು ವಶಿಷ್ಠ ಪೂಜಿಸಿದ

ಪೂಜೆಯಿಂದ ಇಂದ್ರ ಪ್ರಸನ್ನನಾದ ವಶಿಷ್ಠನಿಗೆ ಸೋಮ ಭಾಗವನ್ನು ಕೊಡಲು ಆದೇಶ ನೀಡಿದ ಇಂದ್ರನ ಕೃಪೆಯಿಂದ ವಶಿಷ್ಠ ಮತ್ತು ಅವರ ವಂಶಜರು ಯಜ್ಞದ ಸರ್ವಕರ್ಮಗಳಿಗೂ ಅರ್ಹರಾದರು ದಕ್ಷಿಣೆಯನ್ನು ತೆಗೆದುಕೊಳ್ಳಲು ಅಧಿಕಾರ ಬಂದಿತು ಅವರು ಬ್ರಹ್ಮ ಕರ್ಮ ಬ್ರಾಹ್ಮಣರಾದರು ವಶಿಷ್ಠನು ಅಗ್ನಿಯನ್ನು ಸ್ತೋತ್ರ ಮಾಡಿದ

"ಎಲೈ ಅಗ್ನಿಯೆ ! ಋತ್ವಿಜರು ಅರಣಿಯ ಮೂಲಕ ನಿನ್ನನ್ನು ಪ್ರಕಟಗೊಳಿಸು ತ್ತಾರೆ ಯುವಾಗ್ನಿಯೆ ! ತಾವು ಹೊಳೆಯುವವರು ಜ್ವಾಲೆಗಳಿಂದ ಕೂಡಿದ ತೇಜಸ್ಸುಳ್ಳವರು ಯಾವ ಅಗ್ನಿಯ ಸಮೀಪದಲ್ಲಿ ಋತ್ವಿಜರು ಕುಳಿತುಕೊಳ್ಳು ವರೋ ಅದು ಗಾರ್ಹಪ ತ್ಯಾಗ್ನಿಗಿಂತ ಮಂಗಳಮಯವೂ, ತೇಜಸ್ಸಿನಿಂದ ಕೂಡಿದ್ದೂ ಪುತ್ರ ಪೌತ್ರರನ್ನು ಅನುಗ್ರಹಿಸ ವುದೂ ಪ್ರಕಾಶಮಾನವಾದುದೂ ಆಗಿರುತ್ತದೆ ಅಗ್ನಿಯೆ ! ನೀನು ಮಿತ್ರರ ಹಿತಚಿಂತಕ ಕರ್ಮವೀರರು ತಮ್ಮ ತೇಜಸ್ಸನ್ನು ವಿಭಿನ್ನಕರ್ಮಗಳಿಗೆ ವಿಭಾಗಿಸಿದ್ದಾರೆ ನಮ್ಮ ಪ್ರಾರ್ಥನೆಗಳನ್ನು ಕೇಳಿ ನಮ್ಮ ಯಜ್ಞಕಾರ್ಯಗಳಲ್ಲಿ ಭಾಗವಹಿಸು ಅಗ್ನಿಯೆ ಬೇರೆ ಕಡೆ ವಾಸಿಸುವುದಿಲ್ಲ ನಾವು ಪುತ್ರಹೀನರಾಗಬಾರದು ಶೂನ್ಯಗೃಹಗಳಲ್ಲಿ ವಾಸಿಸುವುದಿಲ್ಲ ವೀರರಿಂದ ಶೂನ್ಯ ರಾಗಬಾರದು ನಿಮ್ಮ ಮಹಾ ಕೃಪೆಯಿಂದ ಪುತ್ರವಂತರಾಗಿ ಸಮೃದ್ಧಿ ಕೂಡಿದ ಗೃಹದಲ್ಲಿ ವಾಸಮಾಡುವಂತಾಗಲಿ"

"ಅಗ್ನಿಯೆ , ಯಜಮಾನನು ಹವಿಸ್ಸನ್ನು ಕೊಟ್ಟು ನೀನು ಪ್ರಜ್ವಲಿಸುವಂತೆ

ಮಾಡುತ್ತಾನೆ ಯಜ್ಞದಲ್ಲಿ ನಿನ್ನ ಪ್ರದಕ್ಷಿಣೆ ಮಾಡುತ್ತಾನೆ ವಿವಿಧ ದೇಶದವರು ನಿನ್ನನ್ನು ಆಹ್ವಾನಿಸುತ್ತಾರೆ ಧನವಂತರಾಗಿ ನಿನ್ನನ್ನು ಸ್ತುತಿಸುತ್ತೇವೆ ಪ್ರತಿದಿನವೂ ನಿನಗೆ ಹವಿಸ್ಸನ್ನು ಕೊಡಲಿ ನಾವು ಕೊಡುವ ರಮಣೀಯ ಹವಿಸ್ಸನ್ನು ದೇವತೆಗಳಿಗೆ ತಲುಪಿಸು ಅಗ್ನಿಯೆ ನಾವು ಸಂತಾನವಿಲ್ಲದವರು ಆಗಬಾರದು ನಾವು ಕನಿಷ್ಟ ಬಟ್ಟೆ ತೊಡದಂತಾಗಲಿ, ರಾಕ್ಷಸರ ಕೈಗೆ ಸಿಗದಂತಾಗಲಿ ಮೃತ್ಯುವು ಮನೆ, ದಾರಿ, ಕಾಡಿನಲ್ಲಿ ನಮ್ಮನ್ನು ಆಲಿಂಗಿಸದಿರಲಿ ”

“ಅಗ್ನಿಯೇ ನೀನು ನಾವು ನೋಡಲು ಶಕ್ಯವಾದ ಜ್ವಾಲೆಗಳಿಂದ ಪ್ರತ್ಯಕ್ಷವಾಗು ನಮ್ಮ ಸಂತಾನವನ್ನು ನಾಶಮಾಡಬೇಡ ಅವರು ಚಿರಂಜೀವಿಗಳಾಗಲಿ. ನಮ್ಮ ಎಲ್ಲಾ ಪ್ರಕರಣಗಳಲ್ಲಿ ಸಹಾಯಕನಾಗು ಮಂಗಳಕಾರ್ಯಗಳು ನನಗೆ ತಿಳಿದಿದೆ. ನಾವು ಸ್ತುತಿಸುತ್ತೇವೆ ಮಂಗಳಕರವಾದ ಧನದಿಂದ ಶೋಭಿಸುವಂತೆ ಮಾಡು ನಾವುಪೂರ್ಣಾಯುಷ್ಯರಾಗಿ ಪುತ್ರ ಪೌತ್ರಾದಿಗಳಿಂದ ನಮ್ಮದಿಯಿಂದ ಇರುವಂತೆ ಮಾಡು ಅಧ್ವರಿಗಳಿ ಘೃತವನ್ನು ಅಗ್ನಿಗೆ ಅರ್ಪಿಸಿ ಹಸುವು ತನ್ನ ಕರುವನ್ನು ನಾಲಿಗೆಯಿಂದ ನಕ್ಕುವಂತೆ ಅದೇ ರೀತಿ ನಕ್ಕುವ ಅಗ್ನಿಗೆ ಅರ್ಪಿಸಿ ಯಜಮಾನರಿಗೆ ಅನ್ನ ಸಂಪತ್ತು ಹಾಗೂ ಶಕ್ತಿಯನ್ನು ಅನುಗ್ರಹಿಸಿ, ರುದ್ರಗಣ ಹಾಗೂ ವಸುಗಣಗಳೊಡನೆ ನಮಗೆ ಮಂಗಳವನ್ನುಂಟುಮಾಡು ”

ಅಗ್ನಿಯೆ ! ನಾವು ನಿನ್ನನ್ನು ಸ್ತುತಿಸುತ್ತೇವೆ ನೀನು ಸ್ತುತ್ಯ ಇಂದ್ರನಿಗೆ ಸಮಾನ ಬಲವುಳ್ಳವನು ನಿನ್ನ ಕೀರ್ತಿಯನ್ನು ಹಾಡುತ್ತೇವೆ. ನೀನು ತೇಜಸ್ವಿ ಪರ್ವತಗಳನ್ನು ಧರಿಸುತ್ತೀ, ಪ್ರಜ್ಞಾಪಕರು ಮಂಗಳವನ್ನುಂಟುಮಾಡುವವರು. ಆಕಾಶ ಮತ್ತು ಭೂಮಿಯ ಅಧಿಪತಿಗಳು ದೇವತೆಗಳು ನಿನ್ನನ್ನು ಸಂತೋಷಗೊಳಿಸುತ್ತಾರೆ ಯಜ್ಞದಿಂದ ವಿಮುಖರಾದವರಿಂದ ಕಟುಭಾಷಿಗಳಿಂದ, ದುರ್ಬುದ್ಧಿಗಳಿಂದ, ಮತ್ತು ಸರ್ಪಗಳಿಂದ ನಮ್ಮನ್ನು ದೂರವಿಡು ಅವುಗಳನ್ನು ನಾಶಮಾಡು ಕತ್ತಲಲ್ಲಿದ್ದವರಿಗೆ ನೀನು ಮಾರ್ಗದರ್ಶನ ಮಾಡಿದ್ದೀಯ ಆಸುರೀ ಮಾಯೆಯನ್ನು ನಾಶ ಮಾಡಿದ್ದೀಯೆ ಉಷಃ ಕಾಲಕ್ಕೆ ಜನ್ಮದಾತನಾಗಿದ್ದೀಯೆ

ಅಗ್ನಿಯೆ ! ರಾಕ್ಷಸರನ್ನು ಓಡಿಸಿದೆ ಅಶ್ವಸಮಾನವೇಗ ನಿನ್ನದು ನೀನು ಮೇಧಾವಿ, ಯಜ್ಞದಲ್ಲಿ ದೂತನ ಕೆಲಸ ನಿನ್ನದು ದೇವತೆಗಳ ಮಿತ್ರ ನೀನು. ನೀನು ಯುವಕ ನಿನ್ನ ಶೋಭನೀಯ ರೂಪ ಪ್ರಕಟವಾದಾಗ ಯಜ್ಞ ಮಾಡಲಾಗುತ್ತದೆ ನೀನು ತೃಪ್ತಹವಿವಾಹಕ ಸ್ವರೂಪನಾದ ನೀನು ಪ್ರಾಣಿಗಳ ಮನೆಯಲ್ಲಿ ವಾಸಮಾಡುತ್ತೀ. ಅಗ್ನಿಯೆ ! ನೀನು ಪಶುಗಳಿಗೆ ಸ್ವಾಮಿ. ನಾವು ಸ್ತುತಿಸುತ್ತೇವೆ ”

ವಶಿಷ್ಠ ವೈಶ್ವಾನರನನ್ನು ಸ್ತೋತ್ರ ಮಾಡಿದ.

“ಇವನು ರಾಕ್ಷಸರನ್ನು ನಾಶಮಾಡುವವನು. ಯಜ್ಞಾನುಷ್ಠಾನ ಮಾಡುತ್ತಾ

ಸ್ತುತಿಯನ್ನು ಮಾಡಿರಿ. ನಾನು ಪ್ರಸನ್ನವಾದ ಮನಸ್ಸಿನಿಂದ ಇಷ್ಟಾರ್ಥಗಳನ್ನು ಅನುಗ್ರಹಿಸುವವನನ್ನು ಸ್ತುತಿಸುತ್ತೇನೆ. ಅಗ್ನಿಯೆ! ನೀನು ಬೆಳಕಿನಿಂದ ತೇಜೋಮಯ ಆಕಾಶ ಮತ್ತು ಭೂಮಿಯನ್ನು ಪರಿಪೂರ್ಣವಾಗಿ ಮಾಡಿದ್ದೀಯೆ ದೇವತೆಗಳನ್ನು ರಾಕ್ಷಸರಿಂದ ಮುಕ್ತಗೊಳಿಸಿದೆ ನೀನು ಸೂರ್ಯನ ರೂಪವನ್ನು ಧರಿಸಿ ಜನ್ಮಿಸುತ್ತೀಯೆ ನೀನು ಸರ್ವಜ್ಞ ಪ್ರಾಣಿಗಳನ್ನು ಸಂದರ್ಶಿಸು ನಮ್ಮ ಸ್ತೋತ್ರಗಳು ನಿನ್ನನ್ನು ಮುಟ್ಟಲಿ ನೀನು ಯಾವಾಗಲೂ ನಮ್ಮನ್ನು ರಕ್ಷಿಸು" ವಶಿಷ್ಠನು ಇಂದ್ರನನ್ನು ಸ್ತುತಿಸಿದ

"ಇಂದ್ರ! ನೀನು ಶತ್ರುಗಳನ್ನು ವಶಮಾಡಿಕೊಳ್ಳುತ್ತೀಯೆ. ನಿನ್ನನು ಸ್ತುತಿಸುವವರಲ್ಲಿದ್ದ ನಾಸ್ತಿಕತೆಯನ್ನು ಹೋಗಲಾಡಿಸುತ್ತೀಯೆ ಅವರ ವಿರುದ್ಧ ವೀರರನ್ನು ಸಿದ್ಧಪಡಿಸಿ ಅವರನ್ನು ನಾಶಮಾಡುತ್ತೀ ಅವರನ್ನು ವಶಪಡಿಸಿಕೊ ಪ್ರತ್ಯಕ್ಷವಾಗಿ ನಾಸ್ತಿಕರನ್ನು ಕೊಂದಿದ್ದೆ ಇಂದ್ರನೆ ನಿನ್ನ ಹಿಂದಿನ ಕಾರ್ಯಗಳು ಉಷಃ ಕಾಲದಂತೆ ವರ್ಣನಾತೀತನಾಗಿವೆ ನಿನ್ನ ಹೊಸ ಕರ್ಮಗಳನ್ನು ವರ್ಣಿಸಲಸಾಧ್ಯ ನೀನು ದೇವಕನನ್ನು ಕೊಂದೆ ಶಿಲೆಗಳಿಂದ ಶಂಬರನನ್ನು ಕೊಂದೆ ಪರಾಶರಾದಿ ಮುನಿಗಳ ಮರಣವನ್ನು ರಾಕ್ಷಸರು ಅಪೇಕ್ಷಿಸಿದ್ದರು ಪರಾಶರರು ಮತ್ತು ನಾನು ನಿನ್ನನ್ನು ಸ್ತುತಿಸುತ್ತೇವೆ ನಾವು ನಿನ್ನ ಮೈತ್ರಿಯನ್ನು ಮರೆಯಲಾರೆವು ನೀನು ಯಾವಾಗಲೂ ನಮ್ಮ ರಕ್ಷಣೆಯನ್ನು ಮಾಡುತ್ತಾ ಇರು"

ಇಂದ್ರನೆ! ದೇವತೆಗಳಲ್ಲಿ ನೀನು ಶ್ರೇಷ್ಠ ನಿನ್ನನ್ನು ಸ್ತುತಿಸಿದ್ದರಿಂದ ಸುದಾಸನಿಂದ ಒಂದು ನೂರು ಹಸುಗಳು ಮತ್ತು ರಥ ಸಿಕ್ಕಿದವು ಹೋತೃವಾಗಿ ಯಜ್ಞದಲ್ಲಿ ಭಾಗವಹಿಸುತ್ತೇನೆ ಶ್ರದ್ಧ ಮತ್ತು ದಾನ ಕರ್ಮಗಳ ರಾಜ ಸುದಾಸನ ಸರ್ವಾಂಗಗಳಿಂದ ಅಲಂಕರಿಸಿದ ಸರಳವಾಗಿ ಹೋಗುವ ನಾಲ್ಕು ಕುದುರೆಗಳು ಪುತ್ರನಂತೆ ನನ್ನನ್ನು ಕರೆದುಕೊಂಡು ಹೋಗುತ್ತವೆ ಯಶಶಾಲಿ [illegible] ಸುದಾಸನು ಉತ್ತಮ ಕರ್ಮಗಳಿಗೆ ದಾನ ಮಾಡುತ್ತಾನೆ ಇಂದ್ರ ಸಮಾನನಾದ ಅವನನ್ನು ಸ್ತುತಿಸುತ್ತಾರೆ ಯುದ್ಧದಲ್ಲಿ ಯುದ್ಧಾಮಧಿ ಎಂಬ ಶತ್ರುಗಳನ್ನು ನದಿಗಳು ನಾಶಮಾಡಿದ್ದವು ಹೇಮರುದ್ಗಣಗಳೆ! ಸುದಾಸ ರಾಜನ ತಂದೆಯನ್ನು ಸುದಾಸನಂತೆ ರಕ್ಷಿಸಿ ಅವನ ಶಕ್ತಿ ಕುಂದದಿರಲಿ ಅವನ ಮನೆಯನ್ನು ರಕ್ಷಿಸಿ"

ವಶಿಷ್ಠನು ವಿಶ್ವದೇವತೆಗಳನ್ನು ಸ್ತುತಿಸಿದ

"ನಮ್ಮ ಸ್ತೋತ್ರಗಳು ರಥವೇಗದಲ್ಲಿ ದೇವತೆಗಳ ಕಡೆ ಹೋಗಲಿ ವರ್ಷಾಕಾಲದ ನೀರು ಭೂಮಿ ಮತ್ತು ದಿನವನ್ನು ಪ್ರಕಟಗೊಳಿಸುತ್ತದೆ ಸ್ತುತಿ ಎಂಬ ನೀರು ಕೇಳಿಸುತ್ತದೆ ಅದು ಇಂದ್ರನನ್ನು ತೃಪ್ತಿಗೊಳಿಸುತ್ತದೆ ವಿಘ್ನಕಾಲದಲ್ಲಿ ಜೀವ ಇಂದ್ರನನ್ನು ಸ್ತುತಿಸುತ್ತದೆ ಇಂದ್ರ ಸ್ವರ್ಣಹಸ್ತದವನು ವಜ್ರಧಾರಿಯಾಗಿದ್ದಾನೆ ಮನುಷ್ಯರೇ ಯಜ್ಞಾಭಿಮುಖರಾಗಿರಿ ಯಜ್ಞಮಾರ್ಗಿಗಳಾಗಿ ರಣಭೂಮಿಯಲ್ಲಿ ಸಂಚರಿಸಿ ಪಾಪಗಳ ಶಾಂತಿಗಾಗಿ ಯಜ್ಞಮಾಡಿರಿ"

ವಶಿಷ್ಠನು ಜಲವನ್ನು ಸ್ತುತಿಸಿದ.

"ಜಲದೇವತೆಯೆ ! ಅಂತರಿಕ್ಷದಿಂದ ನಿನ್ನ ಆಗಮನವಾಗುತ್ತದೆ. ಯಾವ ಜಲದಿಂದ ಸಮುದ್ರ ತುಂಬಿದೆಯೋ ಅದು ಪ್ರವಾಹದಿಂದ ಕೂಡಿದ್ದು ಇಂದ್ರನು ಜಲವನ್ನು ಮುಕ್ತಗೊಳಿಸಿದ ಆ ಜಲ ನಮ್ಮನ್ನು ರಕ್ಷಿಸಲಿ ಜಲಕ್ಕೆ ಒಡೆಯನಾದ ವರುಣನು ಮಧ್ಯಲೋಕದಲ್ಲಿ ಸಂಚರಿಸುತ್ತಾನೆ ಪ್ರಕಾಶದಿಂದ ಕೂಡಿದ ಜಲವು ನಮ್ಮನ್ನು ರಕ್ಷಿಸಲಿ ವರುಣ ಮತ್ತು ಸೋಮರು ಯಾವಜಲದಲ್ಲಿ ವಾಸಿಸುತ್ತಾರೋ ಆ ಅನ್ನದಿಂದ ವಿಶ್ವದೇವರು ಪ್ರಸನ್ನರಾಗಲಿ ಅದು ವೈಶ್ವಾನರ ಅಗ್ನಿಯ ವಾಸಸ್ಥಾನವಾಗಿದೆ ಆ ಜಲದೇವತೆ ನಮ್ಮನ್ನು ರಕ್ಷಿಸಲಿ" ವಶಿಷ್ಠನು ವರುಣನನ್ನು ಸ್ತುತಿಸಿದ

ವರುಣನೆ ! ಮರಣದಿಂದ ನಮ್ಮನ್ನು ರಕ್ಷಿಸು ಗೋಪ್ಯವಾಗಿ ನಮ್ಮ ಮೇಲೆ ಆಕ್ರಮಣ ಮಾಡುವ ಸರ್ಪಗಳಿಂದ ರಕ್ಷಿಸು ಅಗ್ನಿದೇವನೆ ! ಮರಗಳ ಗಂಟಿನಿಂದ ವಿಷವು ಹುಟ್ಟುತ್ತದೆ ಆ ವಿಷದಿಂದ ರಕ್ಷಿಸು ಗುಟ್ಟಾಗಿ ಚಲಿಸುವ ಸರ್ಪವು ನಮ್ಮನ್ನು ಗುರುತಿಸದಿರಲಿ ವಲ್ಮೀಕವೃಕ್ಷ, ಸರಿತು, ಮತ್ತು ಬಳ್ಳಿಗಳಿಂದ ಹುಟ್ಟಿದ ವಿಶದಿಂದ ವಿಶ್ವಗಣಗಳೆ ! ನಮ್ಮನ್ನು ಕಾಪಾಡಿ ಕದ್ದು ಹರಿದಾಡುವ ಸರ್ಪಗಳಿಂದ ಹಾನಿಯಾಗದಿರಲಿ ಎತ್ತರ ತಗ್ಗು ಪ [illegible] ಾಸ ಪ್ರದೇಶಗಳಲ್ಲಿ ಹರಿಯುವ ನದಿಗಳು ಪ್ರಾಣಿಗಳ ಅವಶ್ಯಕತೆಯನ್ನು ಪೂರ್ಣಗೊಳಿಸುತ್ತವೆ ವಿಷವ್ಯಾಧಿಗಳನ್ನು ದೂರ ಮಾಡುವ ಶಕ್ತಿಯನ್ನು ಅವುಗಳಿಗೆ ಅನುಗ್ರಹಿಸು ನದಿಗಳಿಂದ ನಮಗೆ ಹಾನಿಯಾಗದಿರಲಿ "

ವಶಿಷ್ಠನು ಆದಿತ್ಯನನ್ನು ಸ್ತುತಿಸಿದ

"೧೨ ಜನ ಆದಿತ್ಯರು ೪೯ ಮರುದ್ಗಣಗಳು ೩೩೩೩ ದೇವತೆಗಳು ೩ ಋಭುಗಳು ೨ ಅಶ್ವಿನೀಕುಮಾರರು, ಇಂದ್ರ, ಅಗ್ನಿಗಳನ್ನು ಸ್ತೋತ್ರಮಾಡುತ್ತೇನೆ. ಅವರು ನಮ್ಮ ಪಾಲಕರು ಬೇರೆಯವರ ಪಾಪದ ಫಲಗಳನ್ನು ನಾವು ಅನುಭವಿಸದಂತಾಗಲಿ ವಸುಗಣಗಳ ಯಾವ ಕರ್ಮಗಳಿಂದ ನೀವು ನಮಗೆ ನಷ್ಟ ಉಂಟುಮಾಡುತ್ತೀರೋ ಆ ಕರ್ಮಗಳಿಗೆ ನಾವು ಬದ್ಧರಾಗದಂತೆ ಮಾಡಿ"

ವಶಿಷ್ಠನು ದ್ಯಾವಾಪೃಥಿವಿಯನ್ನು ಸ್ತುತಿಸಿದ

"ಸ್ತೋತ್ರ ಮಾಡುವವರು ವಿಶಾಲವಾದ ಆಕಾಶ ಮತ್ತು ಪೃಥ್ವಿಯ ಸ್ತೋತ್ರವನ್ನು ಮಾಡುತ್ತಾರೆ ಅವರನ್ನು ಮೊದಲೇ ಪ್ರತಿಷ್ಠಿಸಲಾಗಿದೆ. ಅವರನ್ನು ನಾನು ಸ್ತುತಿಸುತ್ತೇನೆ. ತಾಯಿ, ತಂದೆ, ಭೂತ, ಆಕಾಶ, ಪೃಥ್ವಿಗಳು ಸ್ತೋತ್ರಪಾಠಕರ ಯಜ್ಞಕ್ಕೆ ಅಗ್ರಮಾನ್ಯರಾಗಿಬರಲಿ. ದೇವ ನೀನು ನಮ್ಮ ಮಿತ್ರ ವ್ಯಾಧಿಗಳನ್ನು ಹೋಗಲಾಡಿಸುವ" ವಶಿಷ್ಠನು ಕ್ರಮವಾಗಿ ವಾಸ್ತೋಷ್ಪತಿ, ಮರುತ್, ಸೂರ್ಯ, ಮಿತ್ರಾವರುಣ, ಅಶ್ವಿನೀ, ಉಷಾ, ಇಂದ್ರ ಮತ್ತು ವರುಣರನ್ನು ಸ್ತುತಿಸಿದ ವಶಿಷ್ಠನು ಮಂತ್ರದ್ರಷ್ಟಾರನಾದ ಋಷಿಯಾದ ಪುರೋಹಿತನೂ ಆದ.

ಒಮ್ಮೆ ವಶಿಷ್ಠನು ತನ್ನ ತಂದೆ ವರುಣನ ಮನೆ ಕಡೆ ಹೊರಟ. ವರುಣನ ಮನೆ ದ್ಯುಲೋಕದಲ್ಲಿತ್ತು ಸ್ವರ್ಣಮಯವಾಗಿತ್ತು. ಅವನ ಆಸನ ಅತ್ಯಂತ ಎತ್ತರ ದಲ್ಲಿತ್ತು. ಸಹಸ್ರ ಕಂಬಗಳಿಂದ ಕೂಡಿ ಸದೃಢವಾಗಿತ್ತು ಅದಕ್ಕೆ ಸಹಸ್ರದ್ವಾರ ಗಳಿದ್ದವು ಸೂರ್ಯನು ಪ್ರಾಣಿಗಳಿಗೆ ತಮ್ಮ ತಮ್ಮ ಕಾರ್ಯಗಳಲ್ಲಿ ಮಗ್ನರಾಗು ವಂತೆ ಸೂಚಿಸಲು ಉದಯಿಸಿ ವರುಣನಲ್ಲಿಗೆ ಹೋಗುತ್ತಿದ್ದ ವರುಣನ ಮನೆ ನೀರಿನ ಮಧ್ಯದಲ್ಲಿತ್ತು.

ವಶಿಷ್ಠ ಪಿತೃಗಣಗಳು, ವರುಣ ದರ್ಶನ ಪಡೆಯಲು ನಿಂತಿದ್ದರು. ಅಲ್ಲಿ ಕೆಲವರು ಮಲಗಿದ್ದರು ವಿಶ್ವಕ್ಕೆ ಅಧಿಪತಿಯಾದ ವರುಣನು ದ್ಯುಲೋಕಮಧ್ಯದಲ್ಲಿ ಕುಳಿತಿದ್ದ. ಎಲ್ಲಾ ಕಡೆ ನೋಡುತ್ತಿದ್ದ ಉಷಃ ಕಾಲ ಹುಟ್ಟುವಂತೆ ಮಾಡಿದ್ದ ಸೂರ್ಯನು ಅತ್ತಿಂದಿತ್ತ ಚಲಿಸುವಂತೆ ಮಾಡಿದ್ದ.

ಭವನದ ಹೊರಗಡೆ ಸೂರ್ಯ ಪ್ರಕಾಶಕ್ಕೆ ಸಮಾನವಾದ ಅವನ ರಥವಿತ್ತು. ರಥದ ಕಂಬಗಳಲ್ಲಿ ನದಿಗಳಿದ್ದವು ಅದರಲ್ಲಿ ಒಬ್ಬರಿಗೆ ಮಾತ್ರ ಸ್ಥಳವಿತ್ತು ಅದು ಅಶ್ವಗಳಿಂದ ಸಿದ್ಧವಾಗಿತ್ತು. ವರುಣ ರಥದಲ್ಲಿ ಕುಳಿತು ದ್ಯುಲೋಕದಲ್ಲಿ ಸಂಚರಿಸು ತ್ತಿದ್ದ.

ಗೂಢಚಾರರ ಒಂದು ದೊಡ್ಡ ಸಮೂಹ ಇರುವುದನ್ನು ವಶಿಷ್ಠ ಅಲ್ಲಿ ನೋಡಿದ ವರುಣನ ಗೂಢಚಾರರು ಎರಡು ಲೋಕಗಳಲ್ಲಿ ಸಂಚರಿಸುತ್ತಿದ್ದರು ಪ್ರಾಣಿಗಳ ಗುಹೆಗಳಿಗೂ ವರುಣ ಅವರನ್ನು ಕಳುಹಿಸುತ್ತಿದ್ದ ಅವರು ದ್ಯುಲೋಕ ದಿಂದ ಬರುತ್ತಿದ್ದರು ಜಗತ್ತಿನಲ್ಲಿ ಸಂಚರಿಸುತ್ತಿದ್ದರು ಅವರಿಗೆ ಸಾವಿರ ಕಣ್ಣುಗಳು. ಜಗತ್ತಿನ ಪ್ರತಿಯೊಂದು ವಸ್ತುವನ್ನೂ ಅವರು ಪರೀಕ್ಷಿಸುತ್ತಿದ್ದರು. ಅವರಿಂದ ಯಾರೂ ತಪ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ ವಶಿಷ್ಠನು, ಚಿನ್ನದ ರೆಕ್ಕೆಗಳುಳ್ಳ ಗೂಢ ಚಾರರನ್ನು ನೋಡಿದ ಅವರು ಹಾರಾಡುತ್ತಿದ್ದರು.

ಮಾನವರ ಪಾಪ ಪುಣ್ಯಗಳಲ್ಲಿ ಲಕ್ಷ್ಯವಿಟ್ಟ ನಿರ್ಮಲವಾದ ಜಲದಲ್ಲಿ ವರುಣ ಸಂಚರಿಸುತ್ತಿದ್ದ. ಗುಟ್ಟಿನೊಳಗಣ ಗುಟ್ಟನ್ನು ಸಹ ಗ್ರಹಿಸುತ್ತಿದ್ದ ಅವನ ದೃಷ್ಟಿ ಯಿಂದ. ಜಲ, ಸ್ಥಲ, ಆಕಾಶದಲ್ಲಿಯ ಯಾವುದೂ ತಪ್ಪಿಸಿಕೊಳ್ಳಲು ಸಾಧ್ಯವಿರ ಲಿಲ್ಲ ಮಾನವರ ಎವೆ ಮುಚ್ಚುವುದು ಬಿಡುವುದು ಅವನಿಗೆ ತಿಳಿಯುತ್ತಿತ್ತು. ಪ್ರಾಣಿಗಳ ಕರ್ಮ ಹುಟ್ಟು ಹಾಗೂ ವಿಚಾರಗಳನ್ನು ಅವನು ಸಂಗ್ರಹಿಸುತ್ತಿದ್ದ ಆಕಾಶ ಹಾಗೂ ಭೂಮಿಯ ಒಳಗೂ ಹೊರಗೂ ನೋಡುವ ಶಕ್ತಿ ಇತ್ತು ಆಕಾಶ ದಲ್ಲಿ ಓಡಿಹೋಗಿ ಬಚ್ಚಿಟ್ಟುಕೊಂಡರೂ ಅವನಿಂದ ತಪ್ಪಿಸಿಕೊಳ್ಳಲಾಗುತ್ತಿರಲಿಲ್ಲ

ಪಾಪಿಗಳ ಪಾಪಕ್ಕೆ ಅನುಗುಣವಾಗಿ ಶಿಕ್ಷೆ ಕೊಡುತ್ತಿದ್ದ ಅವನ ನಿಯಮ ಗಳನ್ನು ಉಲ್ಲಂಘಿಸಿದವರಿಗೆ ದಂಡ ವಿಧಿಸುತ್ತಿದ್ದ. ಪಾಪಿಗಳನ್ನು ಹಗ್ಗಗಳಿಂದ ಕಟ್ಟು ತ್ತಿದ್ದ. ಸುಳ್ಳು ಹೇಳುವವರನ್ನು ಏಳು ಅಥವಾ ಮೂರು ಹಗ್ಗಗಳಿಂದ ಕಟ್ಟುತ್ತಿದ್ದ. ವ್ಯಾಧಿಗಳಿಂದ ಪೀಡಿಸುತ್ತಿದ್ದ ಪಶ್ಚಾತ್ತಾಪಿಗಳ ಬಗ್ಗೆ ಕೃಪೆ ತೋರುತ್ತಿದ್ದ. ಅಂಥವ

ರನ್ನಲ್ಲದೆ ಅವರ ಪೂರ್ವಜರನ್ನೂ ರಕ್ಷಿಸುತ್ತಿದ್ದ ಅರಿಯದೆ ಅವನ ನಿಯಮ ಗಳನ್ನು ಮೀರಿದವರಿಗೆ ಕ್ಷಮಿಸುತ್ತಿದ್ದ ಅವರ ಉಪಚಾರಗಳಿಂದ ಮೃತ್ಯುವನ್ನೂ ಸಹ ಓಡಿಸುತ್ತಿದ್ದ ಪಾಪಿಗಳಿಂದ ಪ್ರಾಣಿಗಳನ್ನು ಮುಕ್ತಗೊಳಿಸುತ್ತಿದ್ದ. ಅವರ ಜೀವನ ಸಮಾಪ್ತಿಯಾಗುತ್ತಿದ್ದರೆ ಅವರ ಆಯುಷ್ಯವನ್ನು ಹೆಚ್ಚುಮಾಡುತ್ತಿದ್ದ. ವರುಣನು ತನ್ನ ಉಪಾಸಕರನ್ನು ಮಿತ್ರರಂತೆ ಕಾಣುತ್ತಿದ್ದ ಉಪಾಸಕರು ಅವ ರೊಡನೆ ಸಂಪರ್ಕ ವಿಟ್ಟುಕೊಳ್ಳುತ್ತಿದ್ದರು ಉಪಾಸಕರು ಮನೋ ನೇತ್ರಗಳಿಂದ ಅವನ ದರ್ಶನ ಪಡೆಯುತ್ತಿದ್ದರು.

ಜಲದೇವತೆಯಾದ ವರುಣನ ಮನೆ ನೀರಿನಿಂದ ಆವೃತವಾಗಿತ್ತು. ಅವನು ತನ್ನ ಮನೆಯಲ್ಲಿ ಕುಳಿತುಕೊಳ್ಳುತ್ತಾನೆ ಪಾಪ ಪುಣ್ಯಗಳನ್ನು ವೀಕ್ಷಿಸುತ್ತಾನೆ. ಮಧುರವಾದ ಜಲದಲ್ಲಿ ಸಂಚರಿಸುತ್ತಾನೆ ಅಲ್ಲಿಯೇ ತನ್ನ ವಸ್ತ್ರಗಳನ್ನು ಧರಿಸು ತ್ತಾನೆ. ವರ್ಷಕಾಲದ ನೀರು ಆಕಾಶದಲ್ಲಿ ಹರಿಯುವ ನೀರು ಮಂಜಿನಿಂದ ಬೀಳುವ ನೀರು ಎಲ್ಲವೂ ಅವನ ಇಚ್ಛೆಯಂತೆ ನಡೆಯುತ್ತವೆ ಸೋಮ ಪರ್ವತಗಳ ಸಂಬಂಧ ದಂತೆ ವರುಣ ಜಲದ ಸಂಬಂಧವಿದೆ ಅವನು ತಂದೆಯಂತೆ ಮಳೆ ಸುರಿಸುತ್ತಾನೆ ಅವನ ವಾಸಸ್ಥಳ ಜಲವೆ ಅವನ ಪತ್ನಿಯೂ ಜಲವೆ ಅವನು ಜಲಕ್ಕೆ ಸ್ವಾಮಿ. ನದಿಗಳಿಗೆ ಅಧಿಪತಿ ಜಲ ಸಮುದ್ರಮಾರ್ಗದಿಂದ ವರುಣ ಬರುತ್ತಾನೆ. ಸಪ್ತನದಿ ಗಳೂ ಸಹ ಅವನ ಮುಖದಲ್ಲಿ ಪ್ರವೇಶಿಸುತ್ತವೆ

ರಾತ್ರಿಯಾಗಿತ್ತು ಸಾವಿರ ಬಾಗಿಲುಗಳ ಅರಮನೆಗೆ ಪ್ರವೇಶಿಸಿದ ವಶಿಷ್ಠ ಅವನು ಒಬ್ಬನೇ ಬರುವುದನ್ನು ನೋಡಿ ಬಾಗಿಲಿನಲ್ಲಿದ್ದ ವರುಣನ ನಾಯಿ ಬೊಗಳಿತು ವಶಿಷ್ಠನು ನಿಲ್ಲಲಿಲ್ಲ ಹೋಗುತ್ತಾ ಇದ್ದ ನಾಯಿ ಅವನನ್ನು ಅಟ್ಟಿಸಿಕೊಂಡು ಹೋಯಿತು ಅವನನ್ನು ಕಚ್ಚಬೇಕೆಂದಿತ್ತು ನಾಯಿಯನ್ನು ಮುದ್ದಿಸಿ ಸಮಾಧಾನ ಮಾಡಿದ ಅದನ್ನು ಅನಂತರ ಹೊಗಳಿದ.

"ಎಲೈವಾಸ್ತೋಷ್ಪತಿಯೆ ! ನೀನು ಬಾಯಿ ತೆರದು ಹಲ್ಲುಗಳನ್ನು ಪ್ರದರ್ಶಿ ಸಿದರೆ ಅವುಗಳು ಆಯುಧದಂತೆ ಇವೆ ನೀನು ಸುಖವಾಗಿ ನಿದ್ರಿಸು ನಾಯಿಯೆ ಎಲ್ಲಿಗೆ ಹೋದರೂ ಪುನಃ ಬರುತ್ತೀಯೆ ನೀನು ಕಳ್ಳರು ಹಾಗೂ ರಾಕ್ಷಸರಲ್ಲಿಗೆ ಹೋಗು ಇಂದ್ರನನ್ನು ಸ್ತುತಿಸುವವರ ಹತ್ತಿರ ಏಕೆ ಬರುತ್ತೀ ? ಅವರ ಕರ್ಮದಲ್ಲಿ ಏಕೆ ತೊಂದರೆ ಮಾಡುತ್ತೀ ? ನೀನು ಸುಖವಾಗಿ ನಿದ್ರಿಸು ನೀನು ಹಂದಿ ಮೊದ ಲಾದವುಗಳನ್ನು ಕೊಲ್ಲು ಸುಖವಾಗಿ ನಿದ್ರಿಸು ವರುಣನ ನಾಯಿ ವಶಿಷ್ಠನ ಸ್ತುತಿ ಯನ್ನು ಕೇಳಿ ಮಲಗಿತು ಮಾರ್ಗದಲ್ಲಿ ತೊಂದರೆ ಇಲ್ಲದ್ದನ್ನು ನೋಡಿ ಮುಂದೆ ನಡೆದ. ಮುಂದೆ ಸೇವಕರು ಸಿಕ್ಕಿದರು ಅವರೂ ಉಪದ್ರವಮಾಡಿದರು ಅವರನ್ನು ವಶಿಷ್ಠ ಸ್ತುತಿಸಿದ.

ಇಂದ್ರೋಪಾಸಕರಿಗೆ ಮಾರ್ಗದಲ್ಲಿ ಏಕೆ ತೊಂದರೆ ಉಂಟು ಮಾಡುತ್ತೀರಿ ? ನೀವು ಸುಖವಾಗಿ ನಿದ್ರಿಸಿ ನಿಮ್ಮ ತಂದೆ ತಾಯಿಗಳೂ ಮಲಗಲಿ ಎಲ್ಲಾ ದಿಕ್ಕಿ

ನಲ್ಲಿರುವ ಮಾನವ ಬಂಧು ಬಾಂಧವರು ನಿದ್ರಿಸಲಿ ಇಲ್ಲಿ ಇರುವವರ, ನೋಡು ತ್ತಿರುವವರ, ತಿರುಗಾಡುತ್ತಿರುವವರ ಎಲ್ಲರ ಕಣ್ಣುಗಳನ್ನೂ ಹಾಳುಮಾಡುವೆನು. ಅವರು ಕಟ್ಟಿಗೆಯಂತೆ ನಿಶ್ಚಲರಾಗುವರು ಸೂರ್ಯನು ಸಮುದ್ರದಿಂದ ಮೇಲೆ ಬಂದಿದ್ದಾನೆ ನಾನೂ ಅವನ ಸಹಾಯ ಪಡೆಯುತ್ತೇನೆ. ಅವನ ಸಹಾಯದಿಂದ ಮಾನವರನ್ನು ನಿದ್ರಿಸುವಂತೆ ಮಾಡುತ್ತೇನೆ ಅಂಗಳದಲ್ಲಿ ಮಲಗಿರುವವರನ್ನು, ವಾಹನಗಳಲ್ಲಿ ಮಲಗಿರುವವರನ್ನೂ, ಹಾಸಿಗೆಯ ಮೇಲೆ ಮಲಗಿರುವವರನ್ನೂ, ಪುಷ್ಪ, ಗಂಧತರುವವರನ್ನೂ ಮತ್ತು ಎಲ್ಲಾ ಸ್ತ್ರೀಯರನ್ನೂ ನಿದ್ರಿಸುವಂತೆ ಮಾಡು ತ್ತೇನೆ" ಭವನದಲ್ಲಿ ಎಲ್ಲರೂ ಮಲಗಿದರು. ಯಾವ ತಡೆಯೂ ಇಲ್ಲದೆ ವಶಿಷ್ಠ ಮುಂದುವರಿದ.

"ಯಾರು ?" ಎಂದು ಕತ್ತಲೆಯಲ್ಲಿ ಬರುತ್ತಿರುವ ಮಾನವಾಕೃತಿಯನ್ನು ನೋಡಿ ಪ್ರಶ್ನಿಸಿದ ವರುಣ

"ಭಗವನ್ ! ನಿಮ್ಮ ಮಗ ವಶಿಷ್ಠ ! ವಶಿಷ್ಠ ನಮಸ್ಕರಿಸುತ್ತಾ ಉತ್ತರಿಸಿದ

"ನೀನು ಇಲ್ಲಿಗೆ ಹೇಗೆ ಬಂದೆ ?" ಚಕಿತನಾಗಿ ವರುಣ ಕೇಳಿದ

"ನಾನು ನಾಯಿಯನ್ನು ಮಲಗಿಸಿದೆ "

"ಮತ್ತೆ ? ಆಶ್ಚರ್ಯದಿಂದ ಪ್ರಶ್ನಿಸಿದ ವರುಣ

"ಸೇವಕರೂ, ಭೃತ್ಯರೂ ಎಲ್ಲರೂ ಮಲಗುವಂತೆ ಮಾಡಿದೆ."

"ಒಳ್ಳೆಯದು" ವರುಣನಿಗೆ ಕುತೂಹಲವಾಯಿತು.

"ತಂದೆಯೆ" ವಶಿಷ್ಠ ಮತ್ತೆ ವಂದಿಸಿದ

"ಅನುಮತಿ ಇಲ್ಲದೆ ಒಂದಿದ್ದೀಯೆ ? ವರುಣನು ಸಿಟ್ಟಾದ ವಶಿಷ್ಠ ಹೆದರಿದ ವರುಣನು ಪಾಶದಿಂದ ಪುತ್ರನನ್ನು ಕಟ್ಟಿದ ಪಾಶಬದ್ಧ ವಶಿಷ್ಠನು ತಂದೆಯನ್ನು ಪ್ರಾರ್ಥಿಸಿದ

"ತಂದೆಯೆ ತಮ್ಮ ಹುಟ್ಟು ಮಹಿಮಾಯುಕ್ತವಾಗಿದೆ ರೋದಸಿಯನ್ನು ಸ್ಥಾಪಿಸಿದ್ದೀರಿ ಆಕಾಶ ಮತ್ತು ನಕ್ಷತ್ರಗಳನ್ನು ಪ್ರೇರೇಪಿಸುತ್ತೀರಿ ಪೃಥ್ವಿಯನ್ನು ಪವಿತ್ರವಾದದ್ದನ್ನಾಗಿ ಮಾಡಿದ್ದೀರಿ ನಿಮ್ಮ ಜೊತೆ ನಾನು ಯಾವ ಸಮಯದಲ್ಲಿರಲಿ ನಾನು ಕೊಡುವ ಹವಿಸ್ಸನ್ನು ಯಾವ ಸಮಯದಲ್ಲಿ ಸ್ವೀಕರಿಸುತ್ತೀರಿ ತಮ್ಮ ದರ್ಶನ ವನ್ನು ಯಾವಾಗಮಾಡಲಿ ಪಾಪ ನಿವಾರಣೆಗಾಗಿ ನಿಮ್ಮಲ್ಲಿ ಯಾವಾಗ ಚರ್ಚಿಸಲಿ ನಾನು ವಿದ್ವಾಂಸರನ್ನು ಪ್ರಶ್ನಿಸಿದ್ದೇನೆ"

"ವಿದ್ವಾಂಸರು ಏನು ಹೇಳುತ್ತಾರೆ ? ವರುಣನು ಪುತ್ರನನ್ನು ಪ್ರಶ್ನಿಸಿದ.

"ತಂದೆಯೆ ನೀನು ನನ್ನಲ್ಲಿ ಕೋಪಗೊಂಡಿದ್ದೀಯೆ" ಎನ್ನುತ್ತಾರೆ ವರುಣನು ಪುತ್ರನನ್ನು ದೃಷ್ಟಿಸಿ ನೋಡಿದ

"ತಂದೆಯೆ ! ಏನು ಅಪರಾಧವಾಗಿದೆ ? ಹೇಳಿ ನಾನು ಶುಭ ಕರ್ಮಿಯಾಗಿ ನಮಸ್ಕರಿಸುತ್ತಾ ತಮ್ಮಲ್ಲಿಗೆ ಬರಬೇಕು ನನ್ನಿಂದ ಅಪಕಾರ ಏನಾಗಿದೆ. ಅದನ್ನು

ಹೋಗಲಾಡಿಸಿ. ಕಟ್ಟಿದ್ದ ಹಗ್ಗವನ್ನು ಬಿಚ್ಚಿದಾಗ ಕರುವು ಸಂತೋಷಪಡುತ್ತದೆ. ಅದರಂತೆ ಪಾಪಗಳಿಂದ ನನ್ನನ್ನು ಮುಕ್ತಗೊಳಿಸಿ "

ಪಿಂಗಲವರ್ಣನು ತನ್ನ ಮಗನ ವಿಷಯುವನ್ನು ಕೇಳಿ ಗಂಭೀರನಾದ. ವಶಿಷ್ಠನು ಪುನಃ ಮುಂದುವರಿಸಿದ-

"ತಂದೆಯೆ ! ಪಾಪವು ಕೇವಲ ನನ್ನ ದೋಷದಿಂದ ಬರುವುದಿಲ್ಲ ಆದರೆ ಕ್ರೋಧ, ಭ್ರಮೆ, ಮೂರ್ಖತನ, ಅಜ್ಞಾನಗಳಿಂದ ಉಂಟಾಗುತ್ತದೆ ದೊಡ್ಡ ಜನರೂ ಸಹ ಕೆಳದರ್ಜೆ ಜನರನ್ನು ಕೆಟ್ಟಮಾರ್ಗದಲ್ಲಿ ಹೋಗಲು ಪ್ರೇರೇಪಿಸುತ್ತಾರೆ. ಸ್ವಪ್ನದಲ್ಲಿಯು ಪಾಪದ ಉತ್ಪತ್ತಿಯಾಗುತ್ತದೆ' ಮತ್ತೆ ಹೇಳಿದ ವಶಿಷ್ಠ.

"ತಂದೆಯೆ ! ಪವಿತ್ರನಾಗಿ ನಾನು ತಮ್ಮ ಸೇವೆ ಮಾಡುವೆ ಅಜ್ಞಾನಿಗಳಿಗೆ ಜ್ಞಾನವನ್ನು ದಯಪಾಲಿಸಿರಿ ಸ್ತೋತೃಗಳಿಗೆ ಧನವನ್ನು ಅನುಗ್ರಹಿಸಿರಿ ಯೋಗ ಕ್ಷೇಮವು ಕಲ್ಯಾಣಕಾರಕವಾಗಲಿ ನಮ್ಮನ್ನು ತಾವು ರಕ್ಷಿಸಿ "

ವೃದ್ಧವರುಣನು ಪುತ್ರನ ಸ್ತುತಿಯಿಂದ ಪೂರ್ಣ ಸಂತುಷ್ಟನಾಗಲಿಲ್ಲ. ವಶಿಷ್ಟನು ತಂದೆಯ ಹೃದಯ ಕರಗಿದ್ದನ್ನು ಕಾಣದೆ ಮತ್ತೆ ಸ್ತುತಿಸಿದ.

"ತಂದೆಯೆ ! ತಾವು ಸೂರ್ಯನಿಗೆ ಅಂತರಿಕ್ಷದಲ್ಲಿ ದಾರಿಮಾಡಿಕೊಟ್ಟಿರಿ. ನದಿಗಳನ್ನು ನೀರಿನಿಂದ ತುಂಬಿರುವಂತೆ ಮಾಡಿದಿರಿ. ದಿನ ರಾತ್ರಿಗಳನ್ನು ವಿಭಾಗಿಸಿದಿರಿ. ವಿಶ್ವಕ್ಕೆ ಸ್ವರೂಪವಾದ ವಾಯು ಜಲವನ್ನು ನಾಲ್ಕೂ ಕಡೆಗೆ ಒಯ್ಯುತ್ತದೆ ಹಸುವು ಹುಲ್ಲನ್ನು ತಿಂದು ಅನ್ನವನ್ನು ಕೊಡುವಂತೆ ಅನ್ನವನ್ನು ವಾಯು ಹೊರುತ್ತದೆ. ತಮ್ಮ ಅನುಚರರು ಯೋಗ್ಯರಿದ್ದಾರೆ. ಆಕಾಶ ಹಾಗೂ ಪೃಥ್ವಿಯ ಶ್ರೇಷ್ಠ ಸ್ವರೂಪಗಳನ್ನು ನೋಡುತ್ತೀರಿ ಸ್ತೋತ್ರಗಳನ್ನು ಸಹ ವೀಕ್ಷಿಸುತ್ತೀರಿ."

"ಪುತ್ರ ! ಪೃಥ್ವಿಗೆ ಇಪ್ಪತ್ತೊಂದು ಹೆಸರುಗಳಿವೆ" ಹಳದಿ ಕಣ್ಣುಗಳ ವರುಣ ಹೇಳಿದ.

"ತಂದೆಯೆ ! ನಿಮ್ಮ ಉಪದೇಶ ಸ್ಮರಣೆಯಲ್ಲಿದೆ ನಿಮ್ಮಲ್ಲಿ ಮೂರು ಸ್ವರ್ಗಗಳಿವೆ. ಅವರಲ್ಲಿ ಮೂರು ವಿಧವಾದ ಭೂಮಿ ಹಾಗೂ ಆರು ದಿಕ್ಕುಗಳಿವೆ ಸುವರ್ಣದ ಕೂಗು ಮುಂಚೆದಂತೆ ಸೂರ್ಯ ತೇಜಸ್ಸನ್ನು ನಿರ್ಮಾಣಮಾಡಿದ್ದೀರಿ. ಸಮುದ್ರವನ್ನು ರಚಿಸಿದ್ದೀರಿ ಹುಟ್ಟಲಿರುವ ಪ್ರತಿ ವಸ್ತುಗಳಿಗೂ ನೀವು ಸ್ವಾಮಿಯಾಗಿದ್ದೀರಿ. ಅಪರಾಧಿಗಳ ಮೇಲೆ ಕರುಣೆ ಇಡುತ್ತೀರಿ" ವರುಣನ ಕಂಠದಿಂದ ಒಂದು ಶಬ್ದವೂ ಹೊರಡಲಿಲ್ಲ ಪುನಃ ವಶಿಷ್ಠನು ಕೈಜೋಡಿಸಿ ಸ್ತುತಿಸಿದ

ದೇವ ! ತಾವು ಯಜ್ಞಯೋಗ್ಯರು ಧನಕ್ಕೆ ಒಡೆಯರು ಜಗತ್ತಿಗೆ ಸೂರ್ಯನನ್ನು ಕೊಟ್ಟಿರಿ ನಾನು ನಿಮ್ಮ ದರ್ಶನವನ್ನು ಮಾಡುತ್ತೇನೆ ಅಗ್ನಿಜ್ವಾಲೆಗಳಿಗೆ ನಮಸ್ಕರಿಸುತ್ತೇನೆ ತಾವು ಸೋಮರಸವನ್ನು ಕುಡಿಯುತ್ತೀರಿ ಆ ದರ್ಶನಕ್ಕಾಗಿ ಶರೀರವನ್ನು ವೃದ್ಧಿಸಿದ್ದೀರಿ ತಂದೆಯೆ ! ತಾವು ಮತ್ತು ನಾನು ಜೊತೆಯಲ್ಲಿ ನೌಕೆಯಲ್ಲಿ ಕುಳಿತಿದ್ದೆವು ಸಮುದ್ರದಲ್ಲಿ ನೌಕೆ ಹೋಗುತ್ತಿತ್ತು. ಅಲೆಗಳ ಮೇಲೆ

ಜೋಕಾಲಿಯಾಡುತ್ತಿತ್ತು ಅದರಲ್ಲಿ ಸುಖವಾಗಿ ಯಾತ್ರೆ ಮಾಡಿದೆವು. ತಾವು ನನ್ನನ್ನು ಕರ್ಮರನನ್ನಾಗಿ ಮಾಡಿದ್ದೀರಿ ತಮಗೆ ಜ್ಞಾಪಕವಿದೆಯೊ ?"

ವರುಣ ಪ್ರಶ್ನಾರ್ಥಕವಾಗಿ ವಶಿಷ್ಠನನ್ನು ನೋಡಿದ. ಮತ್ತೆ ವಶಿಷ್ಠ ಹೇಳಿದ.

"ನಿಮ್ಮ ಮೈತ್ರಿಯು ಹಿಂಸಾರಹಿತವಾಗಿತ್ತು ಅದನ್ನು ಕಾಪಾಡಿಕೊಂಡು ಬರುತ್ತಿದ್ದೆವು. ತಾವು ಅನ್ನಕ್ಕೆ ಸ್ವಾಮಿಯಾಗಿದ್ದೀರಿ ನಾನು ಸಹಸ್ರದ್ವಾರಗಳ ಅರಮನೆಯಲ್ಲಿ ಪ್ರವೇಶಮಾಡಿದೆ ನಿನ್ನ ಅಪರಾಧಿಗಳೂ ಮುಕ್ತರಾದರು ಪಾಪದ ಭೋಗವನ್ನು ನಾವು ಭೋಗಿಸಲಿಲ್ಲ- ನಿಮ್ಮನ್ನು ಸ್ತುತಿಸುವವರಿಗೆ ಗೃಹವನ್ನು ಅನುಗ್ರಹಿಸಿ"

ಶ್ವೇತ ವರ್ಣ ವರುಣನು ಗಂಭೀರನಾದ ನಮಸ್ಕರಿಸುತ್ತಾ ವಸಿಷ್ಠನು ಸ್ತುತಿಸಿದ

"ತಂದೆ ! ನಾನು ನಿನ್ನ ಸ್ತುತಿಪೂರಕ ನನ್ನನ್ನು ಪಾಶ ಮುಕ್ತನನ್ನಾಗಿಮಾಡಿ ನಿಮ್ಮ ರಕ್ಷಣೆಯನ್ನು ಅನುಭವಿಸುತ್ತೇನೆ ನನ್ನನ್ನು ಯಾವಾಗಲೂ ರಕ್ಷಿಸಿ"

ವಶಿಷ್ಠನು ತಂದೆಗೆ ನಮಸ್ಕರಿಸಿದ ವರುಣನು ತನ್ನ ಮಗನ ವಿನಯಕ್ಕೆ ಮಾರುಹೋದ ನಕ್ಕ ನಗುತ್ತಿದ್ದಂತೆಯೇ ಅವನ ಪಾಶಗಳು ಕಳಚಿ ಬಿದ್ದವು. ಅವನು ಪಾಶಗಳಿಂದ ಮುಕ್ತನಾದ ಅವನು ತಂದೆಯ ಪಾದಮುಟ್ಟಿ ನಮಸ್ಕರಿಸಿದ

"ಪುತ್ರ ! ನಿನ್ನ ಇಚ್ಛೆಯೇನು" ? ಸ್ನೇಹದಿಂದ ವರುಣ ಕೇಳಿದ ತಂದೆ ! ಮಣ್ಣಿನ ಮನೆ ನಮಗೆ ಸಿಕ್ಕದಿರಲಿ ನಮ್ಮ ಮೇಲೆ ನಿಮ್ಮದಯೆ ಇರಲಿ ನನಗೆ ಸುಖಕೊಡಿ ವಾಯುವಿನ ಆಘಾತದಿಂದ ಮೇಘದಂತೆ ನಾನು ನಡುಗುತ್ತಾ ಹೋಗು ತ್ತೇನೆ"

ವರುಣನು ಕೈ ಮೇಲೆತ್ತಿ ಅಭಯ ಮುದ್ರೆಯನ್ನು ನೀಡುತ್ತಾ,

"ಕರ್ಮವನ್ನು ನೀನು ಏಕೆ ಮಾಡಲಿಲ್ಲ ?" ಎಂದು ಕೇಳಿದ

"ತಂದೆಯೆ ! ದಾರಿದ್ರ್ಯ ಹಾಗೂ ಅಸಮತೆಯಿಂದ ಅನುಷ್ಠಾನವನ್ನು ನಾನು ಮಾಡಲಾಗಲಿಲ್ಲ ನನ್ನ ಮೇಲೆ ಕೃಪೆ ಇರಲಿ ನನಗೆ ಮಂಗಳವನ್ನುಂಟುಮಾಡಿ ' ಎಂದು ವಿನಯದಿಂದ ಕೇಳಿದ

ವರುಣನು ಸ್ನೇಹ ದೃಷ್ಟಿಯಿಂದ ಪುತ್ರನನ್ನು ನೋಡಿದ

ವಶಿಷ್ಠ ಮತ್ತೆ ನಿವೇದಿಸಿದ

"ತಂದೆ ! ಸಮುದ್ರದಲ್ಲಿದ್ದರೂ ನನಗೆ ಬಾಯಾರಿಕೆಯಾಗಿದೆ ವಿಶಾಲ ಜಲ ರಾಶಿಯ ಮಧ್ಯದಲ್ಲಿದ್ದರೂ ಬಾಯಾರಿಕೆ ಇಂಗಲಿಲ್ಲ ತಾವು ಬಾಯಾರಿದವನನ್ನು ತೃಪ್ತಿಪಡಿಸಿ ದೇವ ಮನುಷ್ಯರಿಂದ ದೇವತೆಗಳಿಗೆ ಅಪರಾಧವಾಗಿದ್ದರೆ ಅಜ್ಞಾನ

ದಿಂದ ಕರ್ಮದಲ್ಲಿ ಲೋಪವಾಗಿದ್ದರೆ ಆ ಪಾಪಗಳಿಂದ ನಮಗೆ ಅನಿಷ್ಟವನ್ನು ಮಾಡ ಬೇಡಿ" ಎಂದು ಹೇಳುತ್ತಾ ಪಾದಗಳಿಗೆ ನಮಸ್ಕರಿಸಿದ

ವರುಣನು ಸಂತೋಷದಿಂದ "ಮಗನೆ ನಿನಗೆ ಮಂಗಳವಾಗಲಿ" ಎಂದು ಹರಸಿದ.

ಆಧಾರಗ್ರಂಥ

ಋಗ್ವೇದ · ೭-೫೫-೨-೩, ೭-೭೭-೧ ೭-೮೬-೮೯. ೭-೮೮-೭.
ಬೃಹದ್ದೇವತಾ : ೯-೧೧-೧೫

**ಟಿಪ್ಪಣಿ** ಪರಲೋಕದ ಕಾಲ್ಪನಿಕ ವರ್ಣನೆಯನ್ನು ಈ ಕಥೆಯಲ್ಲಿ ಮಾಡ ಲಾಗಿದೆ ವೇದದಲ್ಲಿ ನರಕದ ವರ್ಣನೆ ಇಲ್ಲ ನರಕದ ವರ್ಣನೆಯನ್ನು ಬಹಳ ಕಾಲದ ಅನಂತರ ಮಾಡಲಾಗಿದೆ ಆಸುರೀ ವಿಚಾರಗಳು ವೈದಿಕ ವಿಚಾರ ಧಾರೆಯ ಮೇಲೆ ಪ್ರಭಾವ ಬೀರಲು ಯಾವಾಗ ಪ್ರಾರಂಭಿಸಿದವೋ ಮತ್ತು ಆಸುರೀ ಮತವು ಪ್ರಬಲ ವಾದಾಗ ಸ್ವರ್ಗನರಕಗಳ ಕಲ್ಪನೆಗಳಾದವು ಅದರ ಆಸೆಯೊಂದಿಗೆ ಸಂತೋಷ ಮತ್ತು ವಿಶ್ವಾಸವು ಇವುಗಳೊಂದಿಗೆ ಸೇರಿದವು

**ಅಧ್ವರ್ಯು** . ಅಧ್ವರ ಅಂದರೆ ಯಜ್ಞ ಅಧ್ವರ್ಯು ಎಂದರೆ ಯಜ್ಞ ಮಾಡಿಸುವವನು.

**ಅರಣಿ** ಅಗ್ನಿಯನ್ನು ಉತ್ಪಾದಿಸುವ ಎರಡು ಮರದ ಸಾಧನಗಳು ಅದ ರಿಂದ ಅಗ್ನಿಯನ್ನು ಉತ್ಪಾದಿಸುವರು ಉತ್ತರಾರಣಿ ಒಟ್ಟಿದ ಅಶ್ವತ್ಥದ್ದು ಅಧರಾರಣಿಯು ಶಮೀವೃಕ್ಷದ್ದು ಮೃದುವಾದುದು ಉತ್ತರಾರಣಿಯನ್ನು ಹಗ್ಗದಿಂದಲೋ ಅಥವಾ ಕೈಯಿಂದಲೋ ಅಧರಾರಣಿಯನ್ನು ಉಜ್ಜಬೇಕು ಈ ರೀತಿಯಾದ ಘರ್ಷಣೆಯಿಂದ ಅಗ್ನಿಯು ಹುಟ್ಟುತ್ತದೆ

**ಪರಾಶರ** : ನಿರುಕ್ತದಂತೆ ವಶಿಷ್ಠ ಅಂದರೆ ಆರ್ಷಿಕಪರಂಪರೆಯಲ್ಲಿ ಇವನನ್ನು ಶಕ್ತಿಯ ಪುತ್ರನೆಂದೂ ಹಾಗೂ ವಶಿಷ್ಠನ ಮೊಮ್ಮಗನೆಂದೂ ಹೇಳುತ್ತಾರೆ

**ಮತ್ಸ್ಯ** ಶಬ್ದಾರ್ಥವೆಂದರೆ ಮೀನು ಋಗ್ವೇದದಲ್ಲಿ ಸುದಾಸನ ಶತ್ರು ಗಳಲ್ಲಿ ಒಂದು ಜನ ಮತ್ಸ್ಯದ ಉಲ್ಲೇಖವನ್ನು ಕಾಣಬಹುದು

**ಮಿತ್ರ** . ಒಬ್ಬ ವೈದಿಕ ದೇವತೆ ಹನ್ನೆರಡು ಆದಿತ್ಯರಲ್ಲಿ ಮೊದಲನೆಯವ ನೆಂದು ಹೇಳಲಾಗಿದೆ ಮಿತ್ರ ದಿನಕ್ಕೆ ದೇವತೆ

**ವರುಣ** : ಒಬ್ಬ ವೈದಿಕ ದೇವತೆ ಮಿತ್ರನೊಡನೆ ಇವನ ಹೆಸರನ್ನು ಕಾಣ ಬಹುದು ವರುಣರಾತ್ರಿ ದೇವತೆ

**ರುದ್ರ** ಒಬ್ಬ ಋಗ್ವೇದದ ದೇವತೆ ಇವನನ್ನು ಕಪರ್ದಿ ಎಂದು ಕರೆಯ ಲಾಗಿದೆ.

**ವಸುಗಣ** ಒಬ್ಬ ದೇವತೆ ವಸುಗಳು ಎಂಟು. ಆಯು, ಧೃವ, ಸೋಮ, ಧರ, ಅಧವಾಧವ, ಅನೇಲ, ಅನಲ, ಪ್ರತ್ಯೂಷ ಮತ್ತು ಪ್ರಭಾಸ



## ನಾಹುಷ ಮತ್ತು ಸರಸ್ವತಿ

ನಹುಷನ ಮಗ ನಾಹುಷನು ಮಂತ್ರದ್ರಷ್ಟಾ ಋಷಿಯಾಗಿದ್ದ ಒಂದು ಯಜ್ಞಮಾಡಬೇಕೆಂದು ಆಲೋಚಿಸಿದ ಅದು ಒಂದು ಸಹಸ್ರ ವರ್ಷದ್ದಾಗಿತ್ತು. ಯಜ್ಞದ ಸ್ಥಳಾನ್ವೇಷಣೆಗಾಗಿ ರಥವೇರಿ ಹೊರಟ ಜಗತ್ತನ್ನೆಲ್ಲಾ ಸುತ್ತಿದ ನಾಹುಷನು ಜಗತ್ತಿನ ನದಿಗಳನ್ನು ಸಂದರ್ಶಿಸಿದ ಅವುಗಳನ್ನು ಪೂಜಿಸಿದ, ಆದರಿಸಿದ, ವಿನಯದಿಂದ ನದಿಗಳಲ್ಲಿ ನಿವೇದಿಸಿದ

"ನಾನು ಯಜ್ಞಮಾಡಬೇಕೆಂದು ಸಂಕಲ್ಪಿಸಿದ್ದೇನೆ ತಾವುಗಳು ಒಬ್ಬೊಬ್ಬರಾಗಿಯೋ ಅಥವಾ ಸಾಮೂಹಿಕವಾಗಿಯೋ ಅದರಲ್ಲಿ ಭಾಗವಹಿಸಬೇಕೆಂದು ಪ್ರಾರ್ಥಿಸುತ್ತೇನೆ " ಎಂದ

"ರಾಜನೆ ! ನಮ್ಮ ಶಕ್ತಿ ಅಲ್ಪ" ಎಂದು ವಿಧಿಯಿಲ್ಲದೆ ನದಿಗಳು ಹೇಳಿಕೊಂಡವು

"ಆದರೆ ನಾನು ಯಜ್ಞವನ್ನು ಪೂರ್ಣಗೊಳಿಸಬೇಕಾಗಿದೆ' ಎಂದ

"ರಾಜನೆ ! ನೀನು ಒಂದು ಸಾವಿರ ವರ್ಷದ ಯಜ್ಞದಲ್ಲಿ ದೀಕ್ಷಿತನಾಗಬೇಕೆಂದಿರುವೆ ಇದು ಬಹಳ ದೀರ್ಘಕಾಲದ್ದಾಗಿದೆ ಈ ಯಜ್ಞದಲ್ಲಿ ಎಲ್ಲಾ ರೀತಿಯಿಂದ ಭಾಗವಹಿಸಲು ನಾವು ಅಸಮರ್ಥರಾಗಿದ್ದೇವೆ" ಎಂದವು ನದಿಗಳು

"ಆದರೆ ನಾನು ಸಂಕಲ್ಪಮಾಡಿದ್ದಾಗಿದೆ" ಎಂದ

ನದಿಗಳು ಮೌನವಾದವು.

"ನನ್ನ ಸಂಕಲ್ಪ ಪೂರ್ಣವಾಗಬೇಕಾಗಿದೆ" ಎಂದ ಮತ್ತೆ ನದಿಗಳು ತಮ್ಮಲ್ಲಿಯೇ ವಿಚಾರ ವಿನಿಮಯಮಾಡಿಕೊಂಡವು ಅದನ್ನು ನೋಡಿ ಮತ್ತೆ ನಾಹುಷ ವಿನಯದಿಂದ

"ತಾವು ಯಾವುದಾದರೂ ಉಪಾಯವನ್ನು ಸೂಚಿಸಿ ಇಲ್ಲದೆ ಹೋದರೆ ನನ್ನ ಸಂಕಲ್ಪಕ್ಕೆ ಭಂಗ ಉಂಟಾಗುತ್ತದೆ" ಎಂದು ಕೇಳಿಕೊಂಡ

ನಾಹುಷನೆ ! ನೀನು ಸರಸ್ವತಿಯನ್ನು ಆಶ್ರಯಿಸು" ಎಂದವು

"ಸರಸ್ವತೀ" ಆಲೋಚಿಸಿ ಉದ್ಗರಿಸಿದ

"ಹೌದು ರಾಜನೆ ! ಅವಳೊಬ್ಬಳೇ ಸಮರ್ಥಳು" ಎಂದವು

"ರಾಜನೆ ! ಸರಸ್ವತಿಯು ಜ್ಯೋತಿಯ ಮಗಳು. ನದಿಗಳ ತಾಯಿ. ಸಾರಸ್ವತೆ ಯುದ್ಧಾಳುವಿನ ಪತ್ನಿ."

"ಅಲ್ಲಿ ಯಜ್ಞ. . . .? ನಮ್ರತೆಯಿಂದ ಹೇಳಿದ

"ರಾಜನೆ ! ಆ ಸರಸ್ವತೀ ನದಿಯ ತಟದಲ್ಲಿ ಪವಿತ್ರಯಜ್ಞಾಗ್ನಿಯು ಪ್ರಜ್ವಲಿಸುತ್ತದೆ ಆ ದಡದಲ್ಲಿ ರಾಜನಾದ ಚಿತ್ರನು ವಾಸವಾಗುತ್ತಾನೆ ಅವನು ಧನದಾನಿ. ಮೇಘವು ಮಳೆ ಸುರಿಸಿ ಭೂಮಿಯನ್ನು ತಂಪು ಮಾಡುವಂತೆ ರಾಜ ಚಿತ್ರನು ಸರಸ್ವತೀ ನದಿ ತಟ ನಿವಾಸಿಗಳನ್ನು ದಾನದಿಂದ ಸಂತುಷ್ಟಗೊಳಿಸುತ್ತಾನೆ ತಟ ನಿವಾಸಿಗಳು ಸುಖದಿಂದಿದ್ದಾರೆ ರಾಜನೆ ! ಸರಸ್ವತೀ ತಟವು ನಿಜವಾಗಿಯೂ ಯಜ್ಞಭೂಮಿಯಾಗಿದೆ." "ನದಿಗಳೆ ! ಸರಸ್ವತೀ ನದೀ ತಟಕ್ಕೆ ಹೋಗುತ್ತೇನೆ " ಎಂದು ನಿಶ್ಚಯ ಬುದ್ಧಿಯಿಂದ ಹೇಳಿದ.

ಜಗತ್ತಿನ ವಿಶಾಲವಾದ ನದಿ ಸರಸ್ವತಿ ಅದರ ನೀರು ಸಮುದ್ರ ಸೇರುತ್ತದೆ. ಸಮುದ್ರದ ಆ ನೀರು ಮೇಘವಾಗಿ ಪುನಃ ಮಳೆಗರೆಯುತ್ತದೆ ಆ ನೀರು ಪುನಃ ಸರಸ್ವತಿಯಲ್ಲಿ ಸೇರಿ ಹರಿಯುತ್ತದೆ ಅದು ಪುನಃ ಸಮುದ್ರದಲ್ಲಿ ಸೇರುತ್ತದೆ. ಸಮುದ್ರದ ಅಲೆಗಳಲ್ಲಿ ಸರಸ್ವತಿಯ ಸಂಗೀತವನ್ನು ಕೇಳಬಹುದು. ಸರಸ್ವತೀ ನದಿಯ ನಿವಾಸಿಗಳು ? ಎಂದು ನಾಹುಷ ಪ್ರಶ್ನಿಸಿದ.

"ರಾಜನೆ ! ಸರಸ್ವತಿಯ ತಟದಲ್ಲಿ ಐದು ಜಾತಿಯ ನಿವಾಸಿಗಳಿದ್ದಾರೆ. ಒಂದು ಲೋಹಮಯ ದುರ್ಗದಂತಿದೆ. ಬ್ರಹ್ಮಾವರ್ತದ ಪಶ್ಚಿಮದ ಗಡಿಯಾಗಿದೆ ಭರತ ವರ್ಷದ ಪೂರ್ವದ ಗಡಿಯಾಗಿದೆ ಗಂಗಾ ಯಮುನಾ ಮತ್ತು ಶತದ್ರುತುವಿನ ಮಧ್ಯಪ್ರದೇಶದಲ್ಲಿ ಈ ಪುಣ್ಯನದಿಯು ನಿರ್ಮಲ ಜಲದಿಂದ ಹರಿಯುತ್ತದೆ ಅದರ ತಟ ಋಷಿಗಳ ವೇದ ಧ್ವನಿಯಿಂದ ತುಂಬಿದೆ. ಇಂಥ ಪುಣ್ಯ ನದಿಗೆ ನಮಸ್ಕಾರಗಳು" ಎಂದವು. ಮನಸ್ಸಿನಲ್ಲಿ ಸರಸ್ವತಿಯನ್ನು ಧ್ಯಾನಿಸುತ್ತಾ ನಮಸ್ಕರಿಸಿದ.

ನದಿಗಳು ಪ್ರಸನ್ನತೆಯಿಂದ

"ಜಗತೀಪತೆ, ಅಂಬಿಕಾತಮೆ, ನದೀತಮೆ, ದೇವೀತಮೆಯಾದ ಸರಸ್ವತಿಯು ದರಿದ್ರರಿಗೆ ಧನವನ್ನು ಅನುಗ್ರಹಿಸುತ್ತಾಳೆ ಅವಳು ಕಾಂತಿಮಯೆ, ಅವಳ ಆಶ್ರಯದಲ್ಲಿ, ಅನ್ನದ ಉತ್ಪತ್ತಿಯಾಗುತ್ತದೆ. ಅಲ್ಲಿ ದೇವತೆಗಳು ಸೋಮಪಾನ ಮಾಡಿ ತೃಪ್ತರಾಗುತ್ತಾರೆ ಅಲ್ಲಿಯ ಪ್ರಜೆಗಳು ಸಂತಾನದಿಂದ ತೃಪ್ತರಿದ್ದಾರೆ ನಾಹುಷನೆ ! ಇಂದ್ರನು ಪ್ರಜೆಗಳ ಎದುರಿನಲ್ಲಿ ಶೀಘ್ರಗಾಮಿ ಅಶ್ವಶಕ್ತಿಯನ್ನು ಕೊಟ್ಟಿದ್ದಾನೆ ಅವರ ಶಕ್ತಿಯಿಂದ ನಿನ್ನ ಸಂಕಲ್ಪವನ್ನು ಪೂರ್ತಿಗೊಳಿಸು" ಎಂದವು

"ಪೂರ್ತಿಮಾಡುವೆನು ಎಂದ

"ಭೂಪತಿಯೆ , ಸರಸ್ವತಿಯು ಪರ್ವತದಿಂದ ಹುಟ್ಟುತ್ತಾಳೆ ಸಮುದ್ರದ ವರೆವಿಗೆ ಪರಿಕ್ರಮವಾದ ಯಾತ್ರೆಯನ್ನು ಮಾಡುತ್ತಾಳೆ. ದೇವಗಣಗಳು ಅವಳಿಗೆ

ನಮಸ್ಕರಿಸುತ್ತಾರೆ. ಸರಸ್ವತಿಯು ತನ್ನ ಉಪಾಸಕರಿಗೆ ದಯೆ ತೋರಿಸುತ್ತಾಳೆ ಯಜಮಾನನಿಗೆ ದ್ರವ್ಯ ಸಿಕ್ಕುತ್ತದೆ ಆಶ್ರಯದಾತ ವೃಕ್ಷದಂತೆ ಆಶ್ರಯವನ್ನು ನೀಡುತ್ತಾಳೆ ರಾಜನೆ ; ಸರಸ್ವತಿಯನ್ನು ಸ್ತೋತ್ರ ಮಾಡು ಅವಳನ್ನು ಪೂಜಿಸು. ಅವಳ ಕೃಪೆಯಿಂದ ದಿವ್ಯವಾದ ಪ್ರಧ್ವಿಯ ಅನ್ನ ಸಿಕ್ಕುತ್ತದೆ ಅವಳು ಎಲ್ಲರನ್ನೂ ರಕ್ಷಿಸಲಿ" ಎಂದು ನದಿಗಳು ಧ್ಯಾನಿಸುತ್ತಾ ನಮಸ್ಕರಿಸಿದವು

"ರಾಜನೆ ! ಯಜ್ಞಕ್ಕೆ ಆಹ್ವಾನಿಸಿದ ಇಪ್ಪತ್ತೊಂದು ನದಿಗಳಲ್ಲಿ ಒಂದಾದ ಸರಸ್ವತೀ ನದಿಯನ್ನು ಸ್ತೋತ್ರ ಮಾಡು ಸರಸ್ವಾನನ ಕೃಪೆಯಿಂದ ಮಳೆ ಬರುತ್ತದೆ. ಅದರಿಂದ ಜಗತ್ತಿಗೆ ಮಂಗಳ ಉಂಟಾಗುತ್ತದೆ ಅವರ ದರ್ಶನ ಪವಿತ್ರವಾದುದು. ಪೂಜನೀಯವಾದುದು ಅವಳ ಜಲಧಾರೆಯನ್ನು ನಾವೆಲ್ಲರೂ ಪಡೆಯುತ್ತೇವೆ. ಅವರೆಲ್ಲರಿಗೂ ಅನ್ನ ಮತ್ತು ಧನವನ್ನು ಕೊಡುತ್ತಾಳೆ" ಎಂದವು. ನದಿಗಳು ಮತ್ತೆ—

"ರಾಜನೆ ! ಹೊಳೆಯುವ ವರ್ಣವುಳ್ಳ, ಅತಿವೇಗವುಳ್ಳ, ಸರಸ್ವತಿಯು ನಿನಗೆ ಮಂಗಳವನ್ನುಂಟು ಮಾಡಲಿ" ಎಂದು ಆಶೀರ್ವದಿಸಿದವು.

ನಾಹುಷ ರಾಜನು ನದಿಗಳಿಗೆ ವಂದಿಸಿದ. ನದಿಗಳಿಂದ ಬೀಳ್ಕೊಂಡು, ಸರಸ್ವತೀ ನದಿಯ ಕಡೆಗೆ ವೇಗವಾಗಿ ಹೊರಟ

"ದೇವಿ ಸರಸ್ವತಿಯೆ !" ನಾಹುಷನು ಸರಸ್ವತೀ ನದಿಯ ತಟಕ್ಕೆ ಹೋಗಿ ಅಂಜಲೀ ಬದ್ಧನಾಗಿ ವಂದಿಸಿದ

"ರಾಜನೆ ! ನಿನಗೆ ಸ್ವಾಗತ" ಅತಿಥಿಯನ್ನು ಸತ್ಕರಿಸುತ್ತಾ ಹೇಳಿದಳು ಸರಸ್ವತಿ

"ದೇವಿಯಲ್ಲಿ ರಕ್ಷಣೆಗಾಗಿ ಬಂದಿದ್ದೇನ" ನಾಹುಷನು ವಿನಮ್ರನಾಗಿ ವಂದಿಸಿದ.

ರಾಜನು ನಿಂತಿದ್ದ. ಸರಸ್ವತಿಯು ಹಾಲು ಮತ್ತು ತುಪ್ಪದಿಂದ ಸತ್ಕರಿಸಿದಳು ಸತ್ಕಾರದಿಂದ ಸಂತುಷ್ಟನಾಗಿ ರಾಜನು—

"ದೇವಿ ! ನಾನು ಸಹಸ್ರ ವರ್ಷಗಳ ಯಜ್ಞದೀಕ್ಷಿತನಾಗಿದ್ದೇನ" ಎಂದು ನಿವೇದಿಸಿದ

"ಒಳ್ಳೆಯದು ರಾಜನೆ "

"ತಮ್ಮ ಆಶ್ರಯ ಹಾಗೂ ತಮ್ಮ ಕೃಪಾಕಾಂಕ್ಷಿಯಾಗಿದ್ದೇನೆ"

"ರಾಜನೆ ! ಶುಭಕಾರ್ಯದಲ್ಲಿ ಯಾವ ವಿಘ್ನವೂ ಆಗುವುದಿಲ್ಲ ನಿನ್ನ ಯಜ್ಞದ ಪ್ರಶಂಸೆ ಜಗತ್ತಿನಲ್ಲೆಲ್ಲಾ ಹರಡುವುದು. ನಿನ್ನ ಕಾರ್ಯ ಫಲಿಸುವುದು ಈ ಪವಿತ್ರ ಭೂಮಿಯು ಯಜ್ಞದ ಹೊಗೆಯಿಂದ ಸುಗಂಧಿತವಾಗಲಿದೆ ಮತ್ತು ಆಗುತ್ತದೆ "

ಕಾಲಾಂತರದಲ್ಲಿ ಸರಸ್ವತಿಯ ತಟದಲ್ಲಿ ಯಜ್ಞಮಂಟಪವನ್ನು ಹಾಕಿದರು. ಹವಿಸ್ಸುಗಳು ಒಂದು ಕಡೆ ಸೇರಿದವು ಹಾಲು ಮತ್ತು ತುಪ್ಪದಿಂದ ತುಂಬಿ ಹೋಯಿತು ಋಷಿಗಳ ಆಗಮನ ಮತ್ತು ಅವರ ತೇಜಸ್ಸಿನಿಂದ ಭೂಮಿಯು ತೇಜೋಮಯವಾಯಿತು.

ವಿಶಾಲವಾದ ಯಜ್ಞವೇದಿಕೆಯು ನವಯುವಕ ಅಗ್ನಿಯಿಂದ ಸಜ್ಜಾಯಿತು. ಅಗ್ನಿಯು ಹವಿಸ್ಸನ್ನು ಸ್ವೀಕರಿಸತೊಡಗಿದ ಅವನು ಸುಗಂಧದ ಮೂಲಕ ಪುನಃ ಭೂಮಿಗೆ ಹಿಂತಿರುಗಿಸುತ್ತಿದ್ದ ವಾಯುವು ಸುಗಂಧವನ್ನು ತನ್ನ ಹೆಗಲ ಮೇಲೆ ಆಕಾಶವನ್ನು ಶುದ್ಧಮಾಡುತ್ತಾ ಹೊರಟ ಋಷಿಗಳ ಕಂಠದಿಂದ ಹೊರಟ ವೇದ ಧ್ವನಿಯು ಸುಗಂಧಿತ ಸರಸ್ವತೀ ತಟವನ್ನು ಆವರಿಸಿತು ಸರಸ್ವತಿಯು ಉಜ್ವಲ ಅಲೆಗಳು ವೇದ ಗಾನದ ಲಯದೊಂದಿಗೆ ಸಹಸ್ರ ವರ್ಷದವರೆವಿಗೆ ಧ್ವನಿಸುತ್ತಿತ್ತು.

ಆಧಾರ ಗ್ರಂಥ

ಋಗ್ವೇದ ೧-೩೧-೧೭, ೧-೧೦೦-೧೬, ೨-೪೧-೧೬, ೩-೩, ೫-೪-೩, ೫-೭೫-೩, ೬-೨೨-೧೦, ೬-೬೧, ೭-೯೫, ೭-೯೬, ೮-೯-೨೪, ೮-೨೧-೧೭-೧೮, ೮-೨೪-೨೭, ೮೫-೯೫-೨, ೯-೧೦೧-೪-೬, ೧೦-೬೩-೧, ೧೬-೬೪, ೧೦-೭೫,

ಬೃಹದ್ದೇವತಾ ೯-೨೦-೨೪

**ಟಿಪ್ಪಣಿ**, ಸರಸ್ವತೀ ನದಿಯು ಅಫಘಾನಿಸ್ತಾನದ ಹೆಲಮುಂಡ್ ನದಿಯೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ ಇಲ್ಲಿ ಸರಸ್ವತೀ ನದಿಯು ಶ್ರೇಷ್ಠತೆಯನ್ನು ಹೇಳಲು ಪ್ರಯತ್ನಿಸಲಾಗಿದೆ. ಸರಸ್ವತೀ ನದಿಯ ದಡದಲ್ಲಿ ಯಜ್ಞಸಾಮಗ್ರಿಗಳು ಸಿಕ್ಕುತ್ತವೆಂದು ಇದರಿಂದ ತಿಳಿಯಬಹುದಾಗಿದೆ ಇದರ ತಟದಲ್ಲಿ ಐದು ಜಾತಿಗಳ ನಿವಾಸಿಗಳು ವಾಸಿಸುವ ಉಲ್ಲೇಖವಿದೆ

**ಅಸುರ್ಯಾ** ಋಗ್ವೇದದಲ್ಲಿ ಅಸುರ್ಯಾ ಶಬ್ದವು ಸುರಸೇನೆಗಾಗಿ ಬಳಸಲಾಗಿದೆ. ಅಸುರ್ಯಾ ಅಸುರ ಲೋಕವೆಂಬ ಅರ್ಥದಲ್ಲಿಯು ಬಳಸಿದ್ದಾರೆ.

**ನಾಹುಷ**. ಋಗ್ವೇದದಲ್ಲಿ ಅಕ್ಕಪಕ್ಕದ ಅರ್ಥದಲ್ಲಿ ಪ್ರಯೋಗಿಸಲಾಗಿದೆ ನಾಹುಷ ಅಂದರೆ ನಹುಷ ಜನರ ಸಂಬಂಧ ಅಥವಾ ನಹುಷರ ರಾಜನಿಗೆ ಸಂಬೋಧಿಸಲಾಗಿದೆ.

**ಸರಸ್ವತೀ** ಸರಸ್ವತೀ ನದಿಗೆ ಈರಾನಿನಲ್ಲಿ ಹರವೈತೀ ಎಂದು ಹೇಳಲಾಗುತ್ತಿದೆ. ಸರಸ್ವತೀ ಶಬ್ದವು ನದಿಯ ಅರ್ಥದಲ್ಲಿ ಕರೆಯಲಾಗಿದೆ